# ಕೋಗಳಿ ಆಂಜನೇಯ ಸಂಕಥನ

( ಕನ್ನಡ ವಿಶ್ವವಿದ್ಯಾಲಯಕ್ಕೆ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.)
ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)

ಸಂಶೋಧಕ
ಪ್ರೇಮಾನಂದ ಬಿ.

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೬-೦೭

# ಕೋಗಳಿ ಆಂಜನೇಯ ಸಂಕಥನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಮಾಸ್ಟರ್ ಆಫ್ ಫಿಲಾಸಫಿ
(ಎಂ.ಫಿಲ್) ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)


ಸಂಶೋಧಕ
**ಪ್ರೇಮಾನಂದ. ಬಿ**

ಮಾರ್ಗದರ್ಶಕರು
**ಡಾ. ಮಂಜುನಾಥ ಬೇವಿನಕಟ್ಟಿ**
ಪ್ರಾಧ್ಯಾಪಕರು





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬


೨೦೦೬–೦೭

# ಪ್ರಮಾಣ ಪತ್ರ

**'ಕೋಗಳಿ ಆಂಜನೇಯ ಸಂಕಥನ'** ಎಂಬ ಶೀರ್ಷಿಕೆಯ ಸಂಶೋಧನ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಮಂಜುನಾಥ ಬೇವಿನಕಟ್ಟಿಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಇತರೆ ಯಾವುದೇ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ: ೩೧-೦೭-೨೦೦೭

(ಪ್ರೇಮಾನಂದ. ಬಿ)
ಸಂಶೋಧಕ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

ಶ್ರೀ ಪ್ರೇಮಾನಂದ. ಬಿ, ಇವರು **'ಕೋಗಳಿ ಆಂಜನೇಯ ಸಂಕಥನ'** ಎಂಬ ಶೀರ್ಷಿಕೆಯ ಸಂಶೋಧನ ಪ್ರಬಂಧವನ್ನು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಎಂ. ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಲಿ ಬಳಸಿಕೊಂಡಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**(ಮಂಜುನಾಥ ಬೇವಿನಕಟ್ಟಿ)**
ಮಾರ್ಗದರ್ಶಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ:೩೧-೦೭-೨೦೦೭

# ಪರಿವಿಡಿ

# ಕೃತಜ್ಞತೆಗಳು

ನನಗೆ ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಪದವಿಯ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ. ವಿವೇಕರೈ ಹಾಗೂ ಇಂದಿನ ಕುಲಪತಿಗಳಾದ ಡಾ. ಬಿ. ವಿ. ನಾರಾಯಣ, ಕುಲಸಚಿವರಾದ ಕರಿಗೌಡ ಬೀಚನಹಳ್ಳಿ, ಡಾ. ಶ್ರೀ ಶಂಕರ, ಡಾ. ಶ್ರೀ ಪ್ರೇಮಕುಮಾರ, ಅಧ್ಯಯನಾಂಗದ ನಿರ್ದೇಶಕರಾದ ಡಾ. ಚಂದ್ರಶೇಖರವರಿಗೆ ಕೃತಜ್ಞನಾಗಿರುತ್ತೇನೆ.

ಈ ಪ್ರಬಂಧದ ಸಿದ್ದತೆಗೆ ಸಲಹೆ ಮತ್ತು ಮಾರ್ಗದರ್ಶನ ನೀಡಿದ ಜಾನಪದ ವಿಭಾಗದ ಪ್ರಾಧ್ಯಾಪಕರಾದ ಡಾ. ಮಂಜುನಾಥ ಬೇವಿನ ಕಟ್ಟಿಯವರಿಗೆ ನಾನು ಕೃತಜ್ಞನಾಗಿರುತ್ತೇನೆ. ಅತ್ಯಂತ ಕಾಳಜಿವಹಿಸಿ ಎಂ.ಫಿಲ್ ಅಧ್ಯಯನದ ಪಠ್ಯಕ್ರಮವನ್ನು ಬೋಧಿಸಿದ ಜಾನಪದ ವಿಭಾಗದ ಅಧ್ಯಾಪಕ ವೃಂದದವರಾದ ಡಾ. ಸ. ಚಿ. ರಮೇಶ್, ಡಾ. ಮೊಗಳ್ಳಿ ಗಣೇಶ್, ಡಾ. ಹೆಚ್.ಕೆ. ನಾಗೇಶ್, ಡಾ. ಹರಿಶ್ಚಂದ್ರ ಸಾಹಿಬಣ್ಣ ದಿಗ್ಸಂಗಿಕರ್, ಡಾ. ಸಿ. ಟಿ. ಗುರುಪ್ರಸಾದ್ ಮತ್ತು ಬೋಧಕೇತರ ಸಿಬ್ಬಂದಿಯವರಾದ ವಿರುಪಾಕ್ಷಯ್ಯ, ನಭಿಯವರಿಗೂ ನಾನು ಕೃತಜ್ಞನಾಗಿರುತ್ತೇನೆ.

ಈ ಪ್ರಬಂಧದ ಸಿದ್ಧತೆಗೆ ಗ್ರಂಥಗಳನ್ನು ಒದಗಿಸಿದ ಗ್ರಂಥಾಲಯದ ಸಿಬ್ಬಂದಿಗೆ ನಾನು ಕೃತಜ್ಞನಾಗಿರುತ್ತೇನೆ. ಸದಾ ನನ್ನಲ್ಲಿ ಯಶಸ್ಸು ಕಾಣಲು ಬಯಸುವ ನನ್ನ ಅಧ್ಯಯನದ ಬೆಳವಣಿಗೆಗೆ ಕಾರಣರಾದ ಅವ್ವ ಅನ್ನಪೂರ್ಣಮ್ಮನಿಗೆ ನನ್ನ ನಮನಗಳು. ಕ್ಷೇತ್ರ ಕಾರ್ಯದ ಸಮಯದಲ್ಲಿ ಮಾಹಿತಿ ನೀಡಿ ನನ್ನ ಹರಸಿದ ತಂದೆಯ ಸಮಾನರಾದ ಚಿಕ್ಕಪ್ಪ ಕೋಗಳಿ ಪಂಪಣ್ಣನವರಿಗೆ ನನ್ನ ನಮನಗಳು ಹಾಗೂ ಇತರೆ ಸಲಹಾಗಾರರಿಗೂ ನಾನು ಕೃತಜ್ಞನಾಗಿರುತ್ತೇನೆ.

ಸದಾ ನನ್ನ ಒಳಿತನ್ನೇ ಬಯಸುವ ತಮ್ಮ ಪ್ರೀತಿಯನ್ನು ಧಾರೆ ಎರೆದಿರುವ ಅಣ್ಣ ಕಿಶೋರ್ ಕುಮಾರ್, ಅತ್ತಿಗೆ, ವಿಜಯಲಕ್ಷ್ಮಿಯವರಿಗೂ ನಾನು ಕೃತಜ್ಞನಾಗಿರುತ್ತೇನೆ.

ಸದಾ ಸಲಹೆ ಸೂಚನೆಗಳನ್ನು ನೀಡುತ್ತಾ ಬಂದ ಡಾ. ಹನುಮಂತಪ್ಪ ತಾರಿಹಳ್ಳಿಯವರಿಗೂ ನಾನು ಕೃತಜ್ಞನಾಗಿದ್ದೇನೆ. ನನ್ನ ಯಶಸ್ಸಿನಲ್ಲಿ ಸಂತೋಷಪಡುವ ನನ್ನ ಮಾವ ಶ್ರೀ ಎನ್. ತಿಮ್ಮಯ್ಯನವರಿಗೂ ನಾನು ಕೃತಜ್ಞ.

ನನ್ನ ಅಧ್ಯಯನಕ್ಕೆ ಸಹಕರಿಸಿದ ಎಸ್. ಎಸ್. ಎಂ. ಎಸ್. ಮಹಾವಿದ್ಯಾಲಯ ಅಥಣಿಯ ಪ್ರಾಂಶುಪಾಲ ಎಂ. ವಿ. ಗಡಾದ್, ಎ. ಪಿ. ಬಿರಾದಾರ ಪಟೇಲ್, ಉಪನ್ಯಾಸಕರಾದ ಕೆ. ಸಿ. ಸುರೇಶ, ಶ್ರೀಮತಿ ವಸಂತಾ ಕಲ್ಯಾಣಿ, ಎನ್. ಎಸ್. ಚಿಕ್ಕಟ್ಟಿ, ರಾಮಣ್ಣನವರಿಗೆ ನಾನು ಕೃತಜ್ಞನಾಗಿರುತ್ತೇನೆ. ಸುಂದರವಾಗಿ ಛಾಯಚಿತ್ರ ತೆಗೆದು ಕೊಟ್ಟ ಮಿತ್ರ ಭರಮಪ್ಪನಿಗೂ ಕೃತಜ್ಞನಾಗಿರುತ್ತೇನೆ. ಈ ಪ್ರಬಂಧವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಸ್ವಪ್ನ ಕಂಪ್ಯೂಟರ್ಸ್‌ನ ಸಿಬ್ಬಂದಿಯವರಿಗೂ ಮತ್ತು ಈ ಪ್ರಬಂಧವನ್ನು ಬೈಂಡ್ ಮಾಡಿಕೊಟ್ಟ ಕ್ರಿಯೇಟರ್ಸ್‌ನ ಮಿತ್ರರಿಗೂ ಕೃತಜ್ಞನಾಗಿದ್ದೇನೆ.

**ಪ್ರೇಮಾನಂದ. ಬಿ**

# ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಜಾನಪದ ಅಧ್ಯಯನವು ಹಿಂದೆ ಸಂಗ್ರಹ ರೂಪದಲ್ಲಿ ಮಾತ್ರ ತನ್ನ ವ್ಯಾಪ್ತಿಯನ್ನು ಹೊಂದಿತ್ತು. ಆದರೆ ಇಂದು ವೈಜ್ಞಾನಿಕವಾಗಿ ಮುಂದುವರಿದಿರುವ ಸಂದರ್ಭದಲ್ಲಿ ಸಂಗ್ರಹ ರೂಪದ ಆಕರಗಳನ್ನು ವೈಜ್ಞಾನಿಕವಾಗಿ, ಶಾಸ್ತ್ರೀಯವಾಗಿ, ಒಂದು ಶಿಸ್ತು ಬದ್ಧ ಕ್ರಮಕ್ಕೆ ಅಳವಡಿಸಿ ವೈಚಾರಿಕ ವಿಶ್ಲೇಷಣೆಗೆ ಒಳಪಡಿಸುವುದು ಅವಶ್ಯಕವಾಗಿದೆ. ಇಂದು ಕೈಗಾರೀಕರಣ, ನಾಗರೀಕತೆ, ಬಂಡವಾಳಶಾಹಿ ವ್ಯವಸ್ಥೆಯ ಸ್ಥಾಪನೆ ಹಾಗೂ ವೈಜ್ಞಾನಿಕ ಆವಿಷ್ಕಾರಗಳು ಇಡೀ ಮನುಕುಲವನ್ನು ಪಣಕ್ಕೊಡ್ಡಿವೆ. ಈ ಅಂಶಗಳಿಂದ ಭಾರತೀಯ ಸಮಾಜಗಳ ಜೀವನ ಕ್ರಮವು ಹೊಸ ಬಗೆಯ ತಿರುವುಗಳಿಗೆ ದಾರಿಯಾಗಿದೆ.

ನಾಗರೀಕತೆಯ ವ್ಯಾಮೋಹ, ಸಾಂಪ್ರದಾಯಿಕ ಜೀವನ ಕ್ರಮದ ಬದಲಾವಣೆ, ಪಾರಂಪರಿಕ ಉತ್ಪಾದನಾ ವ್ಯವಸ್ಥೆಯ ಜಾಗದಲ್ಲಿ ಅತ್ಯಾಧುನಿಕ ಯಂತ್ರ ನಾಗರೀಕತೆಯ ಹೆಜ್ಜೆಗಳು ಮೂಡತೊಡಗಿರುವುದು, ಮನುಕುಲದ ಬದುಕನ್ನೇ ಇಂದು ಆರ್ಥಿಕತೆಯು ನಿಯಂತ್ರಿಸುತ್ತಿರುವುದು ಕಂಡು ಬರುತ್ತದೆ. ಇಂತಹ ಜಾಗತೀಕರಣದ ಫಲವಾಗಿ ಇಡೀ ಜಗತ್ತೇ ಹಲವಾರು ಸಾಂಸ್ಕೃತಿಕ ಭಿನ್ನತೆಗಳನ್ನು ಮರೆತು ಚಲಿಸುತ್ತಿದೆ.

ಸಮಯದ ಅಭಾವವನ್ನು ಅನುಭವಿಸುತ್ತಿರುವ ಮತ್ತು ಬದಲಾಗುತ್ತಿರುವ ಮನುಷ್ಯನ ಜೀವನ ಶೈಲಿಗೆ ಅನುಗುಣವಾಗಿ ಇಂದು ಮಾನವನು ಹಬ್ಬ–ಹರಿದಿನ, ಜಾತ್ರೆ, ಉತ್ಸವಗಳಂತಹ ಕಾರ್ಯದಲ್ಲಿ ಪಾಲ್ಗೊಂಡು ಅಲ್ಲಿನ ಆನಂದವನ್ನು ಅನುಭವಿಸಲು ಸಾಧ್ಯವಾಗದ ಸ್ಥಿತಿಗೆ ತಲುಪಿದ್ದಾನೆ. ಇಂತಹ ಮಾನವ ಪೀಳಿಗೆಗೆ ಗ್ರಾಮಾಧ್ಯಯನದಂತಹ ಅಥವಾ ಗ್ರಾಮ ದೈವಗಳ, ಜಾತ್ರೆಗಳ ಅಧ್ಯಯನದಿಂದ, ಆ ಗ್ರಾಮಗಳ, ದೈವಗಳ ಮತ್ತು ಜಾತ್ರೆ ಉತ್ಸವಗಳ ಬಗ್ಗೆ ತಿಳಿಯುವಂತೆ ಮಾಡುವ, ಹಾಗೆಯೇ ಗತಕಾಲದ ನಮ್ಮ ಸಂಸ್ಕೃತಿಯ ಕುರುಹನ್ನು, ಸಂಪ್ರದಾಯವನ್ನು, ನಂಬಿಕೆಯನ್ನು ಅರಿಯುವಂತೆ ಮಾಡುವುದು ಇಂತಹ ಅಧ್ಯಯನದ ಉದ್ದೇಶವಾಗಿದೆ.

ದೈವಕ್ಕೆ ಸಂಬಂಧಿಸಿದಂತೆ ಆಚರಣೆಗಳು ಆಯಾ ದೈವದ, ಸಮುದಾಯದ ಹಿನ್ನೆಲೆಯಲ್ಲಿ ಅನಾದಿ ಕಾಲದಿಂದಲೂ ನಡೆದುಕೊಂಡು ಬಂದಿವೆ. ಹೀಗೆ ಪರಂಪರಾನುಗತವಾಗಿ ನಡೆದುಕೊಂಡು ಬಂದಂತಹ ಆಚರಣೆಗಳು, ಹಬ್ಬಗಳು, ಜಾತ್ರೆಗಳು, ಗ್ರಾಮೀಣ ದೈವ ಮುಂತಾದುವುಗಳ ಅಧ್ಯಯನ ಇಂದು ಅನಿವಾರ್ಯ ಮತ್ತು ಅವಶ್ಯಕವಾಗಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಕಂಡು ಬರುವ ಆಕರಗಳಾದ ಜಾತ್ರೆ, ಸಮುದಾಯ, ಗ್ರಾಮ, ಹಬ್ಬ, ಬುಡಕಟ್ಟು, ಸಂಪ್ರದಾಯ ಹಾಗೂ ದೈವ ಇವುಗಳನ್ನು ಸಾಂಸ್ಕೃತಿಕ ಚರಿತ್ರೆಯ ಹಿನ್ನೆಲೆಯಲ್ಲಿ ಪುನರ್ರಚಿಸುವುದು ಅನಿವಾರ್ಯವಾಗಿದೆ. ಈ ಮೇಲಿನ ಜಾನಪದ ಅಂಶಗಳ ಮೂಲಕ ಸಾಂಸ್ಕೃತಿಕವಾಗಿ ಅಧ್ಯಯನ ಮಾಡುವ ವಿಧಾನವು ಮುಂದುವರಿದು ಈ ನಿಟ್ಟಿನಲ್ಲಿ ಗ್ರಾಮಗಳ ಪರಿಚಯ, ಗ್ರಾಮದೈವಗಳ ಪರಿಚಯ, ಮನುಷ್ಯನೊಂದಿಗೆ ಆಯಾ ಗ್ರಾಮದೇವತೆಗಳ ಸಂಬಂಧ, ಅಲ್ಲಿನ ದೇವತೆಗಳ ಕುರಿತ ಆಚರಣೆಗಳು, ನಂಬಿಕೆ, ಕಥೆ, ಗಾದೆ, ಹರಕೆ ಹೀಗೆ ಎಲ್ಲಾ ಅಂಶಗಳನ್ನು ತಿಳಿಯ ಪಡಿಸುವುದು ಈ ಅಧ್ಯಯನದ ಉದ್ದೇಶ.

ಊರಿಗೆ ಒಬ್ಬ ಹನುಮಪ್ಪ; ಊರು ಇದ್ದ ಕಡೆ ಹನುಮಪ್ಪ ಇದ್ದೇ ಇರುತ್ತಾನೆ. ಊರು ಸುಟ್ಟರೂ ಹನುಮಪ್ಪ ಸುಡನು, ಹಳ್ಳಿಗೆ ಹನುಮಪ್ಪನೇ ಚಂದ, ಹನುಮಪ್ಪನ ಗುಡಿ ಇಲ್ಲದ ಊರೇ ಇಲ್ಲ. ಇಂತಹ ಹಲವಾರು ಹೇಳಿಕೆಗೆ ಪಾತ್ರನಾದ ಹನುಮಪ್ಪನು ಕೋಗಳಿ ನಾಡಿನಲ್ಲಿ ನೆಲೆಗೊಂಡು ಆಚರಿಸಿಕೊಳ್ಳುತ್ತಿರುವ ಆಚರಣೆಗಳು, ಪದ್ಧತಿಗಳು ವಿಶಿಷ್ಟವಾಗಿವೆ. ಚಂದ್ರಮಾನ ಯುಗಾದಿಯ ಪಾಡ್ಯದ ದಿನದಿಂದ ಪಂಚಮಿಯವರೆಗೆ ಐದಾರು ದಿನಗಳ ಕಾಲ ಹನುಮಪ್ಪನಿಗೆ ಸಂಬಂಧಿಸಿದಂತೆ ವಿವಿಧ ರೀತಿಯ ಕಾರ್ಯಕ್ರಮಗಳು ಕೋಗಳಿಯಲ್ಲಿ ಜರುಗುತ್ತವೆ.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿರುವ ಒಂದು ಚಿಕ್ಕ ಗ್ರಾಮವೇ ಕೋಗಳಿ. ಹಿಂದೆ ಇದು ಕೋಗಳಿ ೫೦೦ ಎಂದು ಕರೆಯಿಸಿಕೊಂಡಿದ್ದು, ಇತಿಹಾಸ ಚರಿತ್ರೆಯಲ್ಲಿ ಅತ್ಯಂತ ಪ್ರಜ್ವಲಮಾನವಾಗಿ ಬೆಳಗಿದ ನಾಡು ಇದಾಗಿತ್ತು ಎಂದು ಇತಿಹಾಸದಿಂದ ತಿಳಿಯುತ್ತದೆ. ಇದಕ್ಕೆ ಸಾಕ್ಷಿಯಾಗಿ ನೀಲಗುಂದ ಶಾಸನವು

ನಾಡುಗಳೊಳಗೆಲ್ಲಾ ಗಾಡಿವೆತ್ತ ಸಮದ<br>
ನಾಡುಗಳರಸ ನತಿ ಚಲ್ವ: ಕೋಗಳಿ<br>
ನಾಡು ನೋಡಲ್ಕೆ ಸೊಗ ಇಕ್ಕುಂ॥ ಎಂದು ಹೇಳುತ್ತದೆ.

ಇದನ್ನು ನೋಡಿದಾಗ ಕೋಗಳಿಯು ಅನೇಕ ರಾಜ ವಂಶಗಳ ಪ್ರಸಿದ್ಧ ರಾಜರುಗಳು ಆಳಿದ ಬಗ್ಗೆ ಉಲ್ಲೇಖಗಳು ಸಿಗುತ್ತವೆ. ಕ್ರಿ. ಶ. ೮೯೭ರ ಗದಗ ಜಿಲ್ಲೆಯ ಮೇವುಂಡಿ ಗ್ರಾಮದ ಶಾಸನವು ಕೂಡಾ ರಾಷ್ಟ್ರಕೂಟರ ದೊರೆ ಎರಡನೆ ಕೃಷ್ಣನ ಅಧಿಪತ್ಯದಲ್ಲಿ ಯಾದವರ ಮಹಾ ಸಾಮಂತನೊಬ್ಬ ಕೋಗಳಿಯನ್ನು ಆಳಿದ್ದ ಎಂದು ತಿಳಿಸುತ್ತದೆ. ಹಾಗೆಯೇ ಕೋಗಳಿಯಲ್ಲಿಯೇ ದೊರೆತಿರುವ ಕ್ರಿ. ಶ. ೧೦೫೫ರ ಶಾಸನದಲ್ಲಿ ಗಂಗರ ಅರಸ ದರ್ವಿನೀತನ ಕಾಲಾವಧಿಯಿಂದಲೂ (೫೨೯-೫೭೯) ಕೋಗಳಿಯು ಖ್ಯಾತಿ ಹೊಂದಿತ್ತು ಎಂದು ತಿಳಿಸುತ್ತದೆ.

ಕ್ರಿ. ಶ. ೯೨೨-೭೩ರಲ್ಲಿ ಭೂತುಗ ದೇವನು ರಾಷ್ಟ್ರಕೂಟರ ಮೂರನೆ ಕೃಷ್ಣನ ಸೋದರನಾದ ಖೊಟ್ಟಿಗನ ಸಾಮಂತನಾಗಿ ಕೋಗಳಿಗೆ ರಾಜಪಾಲನಾಗಿದ್ದನು. ಗಂಗರ ಸಾಮಂತರ ಅರಸ ಪಾಂಚಾಲ ದೇವನು ಭೂತಗನನ್ನು ಯುದ್ಧದಲ್ಲಿ ಸೋಲಿಸಿ, ಕೋಗಳಿಯಿಂದ ಹೊರ ಬಿದ್ದನು. ಅಲ್ಲಿಂದ ಕೋಗಳಿಯು ಸಾಮಂತರ ಆಳ್ವಿಕೆಗೆ ಒಳಪಟ್ಟಿತು ಎಂದು ತಿಳಿಯುತ್ತದೆ.

ನೀಲಗುಂದ ಶಾಸನದ ಹಿನ್ನೆಲೆಯಲಿ ್ಲ ಕೋಗಳಿಯನ್ನು ಆಳಿದ ಅರಸನು ಅತೀ ಚಲುವನಾಗಿದ್ದು, ಸುಂದರವಾಗಿ ಕೋಗಳಿ-೫೦೦ನ್ನು ಆಳಿರಬೇಕು. ಹಾಗೆಯೇ ಕೋಗಳಿಯು ಬಹು ಸುಂದರವಾಗಿ ಮತ್ತು ಸೊಗಸಾಗಿ ಕಂಗೊಳಿಸುತ್ತಿತ್ತು ಎನ್ನುವುದಕ್ಕೆ ಪೂರಕವಾಗಿ ಇಂದಿಗೂ ಕೋಗಳಿ ಮತ್ತು ಸುತ್ತ ಮುತ್ತಲಿನ ಗ್ರಾಮಗಳು ಸೊಗಸಾಗಿ ಕಾಣುತ್ತವೆ. ಕೋಗಳಿಯ ಸುತ್ತಲೂ ಸದಾ ಹಸಿರಿನಿಂದ ಕೂಡಿದ ನಂದನವನಗಳು ಇದ್ದು, ಇಲ್ಲಿ ಮಾವು, ಬೇವು, ಭತ್ತ, ತೆಂಗು, ಬಾಳೆ ಇತ್ಯಾದಿಯಾಗಿ ಬೆಳೆದು ನಿಂತ ಪೈರುಗಳು, ವರ್ಷದ ಹಲವು ತಿಂಗಳುಗಳ ಕಾಲ ತುಂಬಿ ಹರಿಯುವ ಹಳ್ಳ-ಕೊಳ್ಳಗಳು, ಕರೆ-ಬಾವಿಗಳು, ದೇವಾಲಯಗಳು ನೋಡುವುದಕ್ಕೆ ಮೋಹಕವಾಗಿವೆ.

ಮೇಲಿನ ಶಾಸನದ ತ್ರಿಪದಿಯ ಕೊನೆಯ ಸಾಲು ಕೋಗಳಿಯ ನಾಡು ನೋಡಲ್ಕೆ ಸೊಗಯಿಕ್ಕುಂ ಎನ್ನುವುದನ್ನು ನೋಡಿದರೆ ಈ ನಾಡಿನ ಸಂಪತ್ತು, ಸಂಸ್ಕೃತಿ, ಸಾಂಸ್ಕೃತಿಕ ಸೊಬಗು ಇಂದಿಗೂ ಸೊಗಸಾಗಿ ಕಂಗೊಳಿಸುತ್ತದೆ. ಅಲ್ಲದೇ ಕೋಗಳಿಯಲ್ಲಿನ ಶಾಸನವು ನಾಲ್ಕು ಯುಗದ ಪೊಳಲ್ ಎಂದು ವರ್ಣಿಸುತ್ತದೆ. ಅಂದರೆ ಮುಳಗುಂದ, ಕೋಪಣ ಮತ್ತು ಶ್ರವಣಬೆಳಗೊಳಗಳಿಗೆ ಸಮಾನವಾದ ಪವಿತ್ರ ಕ್ಷೇತ್ರ ಈ ಕೋಗಳಿಯಾಗಿತ್ತಲ್ಲದೇ, ಪಟ್ಟಣಗಳ ಚಕ್ರವರ್ತಿ ಎನಿಸಿತ್ತು. ಈ ರೀತಿ ಹೊಗಳಿಕೆಗೆ ಪಾತ್ರವಾದ ಕೋಗಳಿ ನಾಡು ಇಂದಿಗೂ ಕೂಡ ಹಲವಾರು ವಿಶೇಷತೆಗಳ ತವರೂರಾಗಿ ಕಾಣುತ್ತದೆ.

**ಆಂಜನೇಯ ಸಂಸ್ಕೃತಿ**

ಕೋಗಳಿ ನಾಡಿನಲ್ಲಿ ವಿವಿಧ ರೀತಿಯ ಹಬ್ಬ ಆಚರಣೆಗಳನ್ನು ಆಚರಿಸುತ್ತಾರೆ. ಅವುಗಳಲ್ಲಿ ಯುಗಾದಿ ಸಂದರ್ಭದಲ್ಲಿ ಆಂಜನೇಯನಿಗೆ ಸಂಬಂಧಿಸಿದಂತೆ ಸಾಂಪ್ರದಾಯಿಕ ಆಚರಣೆಗಳು ಕೋಗಳಿಯಲ್ಲಿ ಆಚರಿಸಲ್ಪಡುತ್ತವೆ. ಆಂಜನೇಯನಿಗೆ ಸಂಬಂಧಿಸಿದ ಹಾಗೆ ಐದಾರು ದಿನಗಳವರೆಗೆ ನಡೆಯುವ ಕಾರ್ಯಕ್ರಮಗಳ, ಆಚರಣೆಗಳ ಸರ್ವ ಕಾರ್ಯಕ್ಕೂ ಪ್ರಥಮ ಪೀಠಿಕೆ ಎಂಬಂತೆ ಚಂದ್ರಮಾನ ಯುಗಾದಿಯ ಪಾಡ್ಯದ ದಿನದಂದು ಕಂಕಣಧಾರಣ ಮಾಡುತ್ತಾರೆ. ಅಥವಾ ಕಂಕಣ ಕಟ್ಟುವ ಪದ್ಧತಿ ನಡೆಯುತ್ತದೆ. ಕಂಕಣ ಧಾರಣ ಮಾಡಿಕೊಂಡವರು ಎಲ್ಲಾ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಜವಾಬ್ದಾರಿಯುತವಾಗಿ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ದೇವಸ್ಥಾನದಲ್ಲಿ ಹಂದರ ಹಾಕುವುದು, ಉತ್ಸವ ಮೂರ್ತಿಯ ಮೆರವಣಿಗೆ, ಓಕುಳಿ ಹೊಂಡಕ್ಕೆ ನೀರು ತುಂಬುವುದು, ಹಂದರ ಹಾಕಿ ಕಾಯ ಕಟ್ಟುವುದು, ಓಕುಳಿಯಾಡುವುದು, ಬೇಟೆ ಗಿಡ ತರುವುದು, ಬಯಲು ಆಂಜನೇಯನ ಪೂಜೆ, ಮುಳ್ಳು ಪವಾಡ, ಕಡುಬಿನ ಕಾಳಗ, ಬೇಟೆಗೆ ಹೋಗುವುದು ಇತ್ಯಾದಿ ಕಾರ್ಯಕ್ರಮಗಳು ಯುಗಾದಿ ಹಬ್ಬದಲ್ಲಿ ಜರುಗುತ್ತವೆ.

ಈ ಎಲ್ಲಾ ಕಾರ್ಯಗಳು ಮುಗಿಯುವವರೆಗೂ ಕಂಕಣ ಧಾರಿಗಳು ನಿರಾಹಾರಿಗಳಾಗಿ ಕೇವಲ ದ್ರವ ರೂಪದ ಆಹಾರವನ್ನು ತೆಗೆದುಕೊಳ್ಳುತ್ತಾರೆ. ನಾವು ೨೧ನೆ ಶತಮಾನದೊಳಗಿದ್ದರೂ

ವೈಜ್ಞಾನಿಕವಾಗಿ ಬಹಳಷ್ಟು ಮುಂದುವರೆದಿದ್ದರೂ ಕೂಡ ವೈಜ್ಞಾನಿಕ ಸತ್ಯ ಎನ್ನುವ ಹಾಗೆ ಇಂತಹ ಆಚರಣೆಗಳು ಇಂದಿಗೂ ನಮ್ಮ ಜನಪದರಲ್ಲಿ ನಡೆಯುತ್ತವೆ. ಮನುಷ್ಯ ಮುಳ್ಳಿನ ಮೇಲೆ ಮಲಗಿ ಊರು ತುಂಬಾ ಮೆರವಣಿಗೆ ಮಾಡಿಕೊಂಡು ಮೇಲೆ ಎದ್ದರೂ ಕೂಡಾ, ಮುಳ್ಳಿನ ಪವಾಡ ಮಾಡಿದ ವ್ಯಕ್ತಿಗೆ ಯಾವುದೇ ರೀತಿಯ ಗಾಯಗಳಾಗದಿರುವುದು ಆಶ್ಚರ್ಯ. ವೈಜ್ಞಾನಿಕವಾಗಿ ಸಮಾನವಾಗಿ ಜೋಡಿಸಿದ ಮುಳ್ಳುಗಳಲ್ಲಿ ಮನುಷ್ಯನ ಸಮಾನವಾದ ದೇಹವನ್ನು ಇರಿಸಿದರೆ ಮುಳ್ಳುಗಳ ಮೇಲೆ ಸಮಾನವಾದ ಭಾರ ಬಿದ್ದಾಗ ಯಾವುದೇ ರೀತಿಯ ಗಾಯಗಳಾಗುವುದಿಲ್ಲ ಎನ್ನುವುದು ವೈಜ್ಞಾನಿಕ ಸತ್ಯವಾದರೂ ಇಲ್ಲಿನ ಮುಳ್ಳಿನ ಪವಾಡದ ವಿಶೇಷತೆಯು ಬೇರೆ. ಮುಳ್ಳಿನ ಪವಾಡ ಮಾಡುವ ವ್ಯಕ್ತಿಯು ಕೌಪೀನಧಾರಿಯಾಗಿದ್ದು, ಆತನಿಗೆ ವಿಶ್ವಕರ್ಮ ಸಮುದಾಯದ ಕಲಾವಿದನೊಬ್ಬ ಆಂಜನೇಯನ ಅವತಾರವೇನೊ ಎನ್ನುವ ಹಾಗೆ ಬಣ್ಣವನ್ನು ಬಡಿದು ಸಾಕ್ಷಾತ್ ಆಂಜನೇಯನ ರೂಪು ಬರುವಂತೆ ಮಾಡುತ್ತಾನೆ. ನಾಲ್ಕಾರು ದಿನಗಳ ಕಾಲ ನಿರಾಹಾರಿಯಾಗಿದ್ದ ದಾಸಪ್ಪನನ್ನು ಊರಿನ ತುಂಬಾ ಮೆರವಣಿಗೆ ಮಾಡಿ ಮುಳ್ಳಿನ ಗದ್ದುಗೆಯ ಮೇಲೆ ಮಲಗಿಸಿ, ಊರಿನ ತುಂಬಾ ಪುನಃ ಮೆರವಣಿಗೆ ಮಾಡಿ ಆಂಜನೇಯನ ದೇವಾಲಯಕ್ಕೆ ತರುತ್ತಾರೆ. ಇದರ ಉದ್ದೇಶ ಮಾರಕ ಕಾಯಿಲೆಗಳು ಗ್ರಾಮಕ್ಕೆ ಬಾರದಿರಲಿ ಎನ್ನವುದು. ಗಂಡುಕಾರಿಯ ಮುಳ್ಳನ್ನು ತಂದು ಗದ್ದುಗೆಯನ್ನು ನಿರ್ಮಿಸಿ, ದಾಸಪ್ಪನನ್ನು ಮಲಗಿಸಿ, ಬೇವಿನ ತೊಪ್ಪಲಿನಿಂದ ಗಾಳಿಯನ್ನು ಬೀಸುವುದರ ಮುಖಾಂತರ ಮುಳ್ಳಿನ ಪವಾಡ ಜರುಗುತ್ತದೆ. ಇದನ್ನು ನೋಡುವುದಕ್ಕಾಗಿ ಸುತ್ತ ಮುತ್ತಲಿನ ಗ್ರಾಮಗಳ ಜನರು ಕೋಗಳಿಗೆ ಬಂದು ಯಾವುದೇ ಮತ ಭೇದವಿಲ್ಲದೇ ಪಾಲ್ಗೊಂಡು ಭಾವೈಕ್ಯತೆಯನ್ನು ಮೆರೆಯುತ್ತಾರೆ. ಈ ಕಾರ್ಯಕ್ರಮದಲ್ಲಿ ಊರಿನ ಸರ್ವ ಮತೀಯರು ಒಂದೊಂದು ಕಾರ್ಯಕ್ರಮದಲ್ಲಿ ತೊಡಗಿ, ಕಾರ್ಯ ನಿರ್ವಹಿಸಿ, ಸರ್ವ ಮತೀಯರು ಐಕ್ಯತೆಯ ಭಾವನೆಯಿಂದ ವರ್ಣ ಭೇದವನ್ನು ಮರೆತು ಎಲ್ಲರೂ ಸೋದರ ಭಾವದಲ್ಲಿ ಸಂತೋಷವನ್ನು ಹಂಚಿಕೊಳ್ಳುವುದು ಒಂದು ವಿಶೇಷ. ಹಾಗೂ ಮುಳ್ಳು ಪವಾಡ ನೆರವೇರುವಾಗ ಆ ವ್ಯಕ್ತಿಯನ್ನು ಪ್ರೋತ್ಸಾಹಿಸಲು ಭಕ್ತಾದಿಗಳು ರಾಮ ನಾಮ, ವೀರ ಘೋಷ, ಯುವಕರ ಮನೋರಂಜನೆ, ಕೂಗಾಟ, ವಾದ್ಯಗಳ ಸದ್ದುಗದ್ದಲ ಆಕರ್ಷಣೀಯವಾಗಿ ಕಂಡರೂ ಅಚಲರ ಮನಸ್ಸಿಗೆ ಭಯಾನಕವಾಗಿ ಮುಗ್ಧರ, ಭಕ್ತರ ಮನಸ್ಸಿಗೆ ಭಕ್ತಿಯ ದ್ಯೋತಕವಾಗಿ ಆ ಮುಳ್ಳು ಹಾಸಿಗೆಯ ಮೇಲೆ ಮಲಗಿದ ಆಂಜನೇಯ ಸ್ವರೂಪಿ ದಾಸಪ್ಪ ಕಂಗೊಳಿಸುತ್ತಾನೆ. ಗ್ರಾಮದ ತುಂಬಾ ಈತನನ್ನು ಮೆರೆಸುವುದು ಸಾಂಪ್ರದಾಯಿಕವಾಗಿದ್ದರೂ ಧರ್ಮದ ಮೂಲಕ ದಾರ್ಶನಿಕ ಭಾವನೆಯನ್ನು ಮೂಡಿಸುತ್ತದೆ. ಮುಳ್ಳಿನ ಪವಾಡ ಮುಗಿದ ನಂತರ ಆ ಗದ್ದುಗೆಯ ಮುಳ್ಳನ್ನು ಭಕ್ತಾದಿಗಳು ತಮ್ಮ ತಮ್ಮ ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಪವಾಡದ ಗದ್ದುಗೆಯ ಮುಳ್ಳನ್ನು ಮನೆಯಲ್ಲಿ ಇಟ್ಟು ಪೂಜೆ ಮಾಡಿದರೆ ಯಾವುದೇ ರೀತಿಯ ಮಾರಕ ಕಾಯಿಲೆಗಳು ಮನೆಯಲ್ಲಿ ಕಾಣಿಸಿಕೊಳ್ಳುವುದಿಲ್ಲ ಎನ್ನುವ ನಂಬಿಕೆ ಜನಪದರರದು. ಹೀಗೆ ಹಲವಾರು ರೀತಿಯ ಜನಪದ ನಂಬಿಕೆಯ ಆಚರಣೆಗಳು ಯುಗಾದಿಯಲ್ಲಿ ನಡೆಯುತ್ತವೆ.

ಭಾರತದ ಎಲ್ಲಾ ಗ್ರಾಮಗಳಲ್ಲೂ ಆಂಜನೇಯನ ಗುಡಿ ಇದ್ದೇ ಇರುತ್ತದೆ. ಕರ್ನಾಟಕದಲ್ಲಿ ಅದರಲ್ಲೂ ಉತ್ತರ ಕರ್ನಾಟಕದಲ್ಲಿ ಈತನ ಭಕ್ತರು ಹೆಚ್ಚು ಎಂದೇ ಹೇಳಬಹುದು. ಈ ಭಾಗದಲ್ಲಿ

ಆಂಜನೇಯನಿಗೆ ಎಲ್ಲಿಲ್ಲದ ಮಹತ್ವ, ಈತನಿಗೆ ಬಳ್ಳಾರಿ ಜಿಲ್ಲೆಯ ಹಂಪಿ ಪ್ರದೇಶಕ್ಕೊಳಪಡುವ ಕಿಷ್ಕಿಂದೆಯಲ್ಲಿ ವಿಶಿಷ್ಟ ಸ್ಥಾನವಿದೆ. ಆಂಜನೇಯನು ಇಲ್ಲಿನ ಜನರಿಗೆ ಜನಪ್ರಿಯ ದೈವನಾಗಿದ್ದಾನೆ. ಜಾತಿ–ಜನಾಂಗಗಳ ಬೇಧವಿಲ್ಲದೆ ಎಲ್ಲರಿಂದಲೂ ಪೂಜಿಸಿಕೊಳ್ಳುತ್ತಿರುವ ಏಕೈಕ ದೈವವಾಗಿದ್ದಾನೆ. ಹಾಗಾಗಿ ಈತನ ಕುರಿತ ಅಧ್ಯಯನ ಅವಶ್ಯಕವಾಗಿದೆ.

ಯಾವುದೇ ಅಧ್ಯಯನ ಕೈಗೊಂಡರೂ ಅದಕ್ಕೊಂದು ಇತಿ ಮಿತಿ ಇದ್ದೇ ಇರುತ್ತದೆ. ಹಾಗೆಯೇ ಕೋಗಳಿ ಆಂಜನೇಯನ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆಲವು ಪ್ರಮುಖ ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಕೋಗಳಿ ಗ್ರಾಮ, ಆಂಜನೇಯ ಸ್ವಾಮಿ ಮತ್ತು ಆತನಿಗೆ ಸಂಬಂಧಿಸಿದಂತೆ ಆಚರಣೆಗಳು, ಆಂಜನೇಯ ಸ್ವಾಮಿ ಇತರೆ ದೇವತೆಗಳೊಂದಿಗೆ ಸಂಬಂಧ, ಈತನ ಕುರಿತ ಹಾಡು, ಕಥೆ, ಗಾದೆ ಮತ್ತು ಹರಕೆ ಇವುಗಳ ವಿವರವಾದ ಮಾಹಿತಿ ಸಂಗ್ರಹಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ಕೋಗಳಿ ಆಂಜನೇಯ ಸಂಕಥನ – ಅಧ್ಯಯನಕ್ಕೆ ಸಂಬಂಧಿಸಿದಂತೆ ವಿವರವಾದ ಮಾಹಿತಿಯನ್ನು ಸಂಪೂರ್ಣ ಕ್ಷೇತ್ರಕಾರ್ಯದ ಮುಖಾಂತರ ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಿದ್ದು, ಕ್ಷೇತ್ರಕಾರ್ಯ ವಿಧಾನವನ್ನು ಪ್ರಶ್ನಾವಳಿ, ವೀಕ್ಷಣೆ ಮತ್ತು ಸಂದರ್ಶನದ ಮುಖಾಂತರ ಕೈಗೊಳ್ಳಲಾಗಿದೆ. ಅಲ್ಲಲ್ಲಿ ಅಧ್ಯಯನಕ್ಕೆ ಪೂರಕವಾಗಿ ಕೆಲ ಗ್ರಂಥಗಳ ಬಳಕೆ ಮಾಡಿಕೊಂಡು ಪ್ರಬಂಧ ಸಿದ್ಧಪಡಿಸಲಾಗಿದೆ.

# ಅಧ್ಯಾಯ – ೨
## ಕೋಗಳಿಯ ಪರಿಚಯ

ಪ್ರಪಂಚ ಎನ್ನುವ ಪದವು ಪಂಚಭೂತಗಳಾದ ನೀರು, ಗಾಳಿ, ಬೆಳಕು, ಭೂಮಿ, ಆಕಾಶಗಳಿಂದ ಆವರಿಸಲ್ಪಟ್ಟಿರುತ್ತದೆ. ಇಂತಹ ಪ್ರಾಕೃತಿಕ ಸಂಪತ್ತನ್ನು ಅನುಭವಿಸಲು ಲಕ್ಷಾಂತರ ಜೀವಿಗಳು ಸೃಷ್ಟಿಯಾಗಿವೆ. ಅಂತಹವುಗಳಲ್ಲಿ ಬುದ್ಧಿ ಪ್ರಾಧಾನ್ಯತೆಯನ್ನು ಹೊಂದಿದ ಮನುಷ್ಯನು ಕೂಡ ಒಬ್ಬ. ಈ ಮಾನವನ ಬದುಕು ಬಹು ಎತ್ತರದಲ್ಲಿ ನಿಲ್ಲುತ್ತದೆ. ಆ ಬದುಕಿಗೆ ಬಹು ವಿಸ್ತಾರವಾದ ಸಂಸ್ಕೃತಿ, ಚರಿತ್ರೆ, ಪರಂಪರೆಗಳು ಜೀವನದುದ್ದಕ್ಕೂ ಪ್ರವಹಿಸುವ ನದಿಗಳಂತೆ ಹರಿದು ಬರುತ್ತಲೇ ಇರುತ್ತವೆ.

### ೧. ಭೌಗೋಳಿಕ ಹಿನ್ನೆಲೆ

ವಿಚಾರವಂತ ಮನುಷ್ಯ ಪ್ರಾಕೃತಿಕ ಪರಿಸರದ ಒಡನಾಟದಲ್ಲಿ ತನ್ನ ಬದುಕನ್ನು ಸಾಗಿಸುತ್ತಿರುವುದರಿಂದಲೇ ಅದನ್ನು ಜಗತ್ತು ಎಂದು ಕರೆಯುವುದು. ಅವನು ಹುಟ್ಟಿದೊಡನೆಯೇ ಗ್ರಾಮಗಳ ಹೆಸರುಗಳು, ಮನೆ, ಮಠ, ಗುಡಿಸಲು, ಗೋಪುರ ಎಂಬ ಸ್ವರೂಪದಲ್ಲಿ ಕಂಡು ಬಂದವು. ಇದಕ್ಕೆ ಪೂರ್ವದಲ್ಲಿ ಈತನು ಮರದ ಪೊಟರೆ ಮತ್ತು ಕಲ್ಲು ಗುಹೆಗಳಲ್ಲಿ ವಾಸವಾಗಿದ್ದ. ಆಗ ಆರಂಭದಲ್ಲಿ ಗೆಡ್ಡೆ, ಗೆಣಸು, ಹಸಿಮಾಂಸವನ್ನು ತಿಂದು ಬದುಕುವ ಕಾಲಘಟ್ಟ ಮುಗಿದು ಹೋಗಿ ಪ್ರಕೃತಿಯ ಮಜಲುಗಳಾದ ಕೆರೆ, ಹೊಳೆ, ನದಿ, ಕಾಲುವೆ, ಹಳ್ಳ ದಿಬ್ಬ, ಬಯಲು, ಗುಡ್ಡ, ಭೂಫಲವತ್ತತೆ ಎಲ್ಲಿವೆಯೋ ಅಲ್ಲಿ ನೆಲೆಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮನುಷ್ಯ ಮಾಡಿದನು. ಕಾಲಕಳೆದಂತೆ ಆ ನೆಲೆಗಳೇ ಊರು, ಹಳ್ಳಿ, ಹಟ್ಟಿಗಳಾದವು. ಈ ಊರು, ಹಳ್ಳಿ, ಹಟ್ಟಿಗಳೆಂದ ಕೂಡಲೇ ಪ್ರಾಕೃತಿಕ ಅಥವಾ ಭೌಗೋಳಿಕ ಪ್ರದೇಶದ ಆಳ, ವಿಸ್ತಾರ, ಬಿತ್ತಾರಗಳು ಗಮನಕ್ಕೆ ಬಂದು, ದುಡಿದು ತಿನ್ನುವ ಹರಕು ಬಟ್ಟೆಯ ಮುರುಕು ಮನೆಗಳ ಗುಡಿಸಲು ಕೊಂಪೆಗಳ ಪಂಕ್ತಿ ಒಂದೆಡೆಯಾದರೆ, ಭವ್ಯ ಬಂಗಲೆ, ಉನ್ನತ ವ್ಯವಸ್ಥೆಯ ಮನೆಗಳನ್ನು ಹೊಂದಿರುವ ಸಿರಿವಂತ ವರ್ಗವನ್ನು ಇನ್ನೊಂದೆಡೆ ಕಾಣಬಹುದು. ಅದರ ಸ್ವರೂಪವನ್ನು ಕೆರೆ, ಹಳ್ಳಗಳು, ಕಾಡು, ಬೆಟ್ಟಗಳು, ದೇವಸ್ಥಾನ ಮಂದಿರಗಳು ಹೀಗೆ ಇಲ್ಲಿ ಜೀವನೋಪಾಯಕ್ಕಾಗಿ ಬದುಕು ಸವೆಸುವ ಅನೇಕ ಕುಲಕಸುಬುಗಳನ್ನು ಹೊಂದಿದ ಜನರನ್ನು ಕಾಣಬಹುದು.

ಸಾಮಾನ್ಯವಾಗಿ ಪ್ರತಿ ಊರಿನಲ್ಲಿ ಬಾವಿ, ಚಾವಡಿ, ಗ್ರಾಮ ದೇವತೆಯ ಗುಡಿ, ಊರಿನ ಹತ್ತಿರವೇ ಕೆರೆ, ಹಳ್ಳ, ತೋಪುಗಳನ್ನು ಕಾಣಬಹುದು. ಇಲ್ಲಿ ನಿರ್ಧಿಷ್ಟ ರಚನೆಯ ಮನೆಗಳನ್ನು ಕಾಣಲು ಆಗುವುದಿಲ್ಲ. ಒಂದು ಊರಿನ ಭೌಗೋಳಿಕ ಹಿನ್ನೆಲೆ ಎಂದರೆ ಆ ಊರಿನಲ್ಲಿರುವ ಜನ, ಅಲ್ಲಿನ ಮನೆಗಳು, ಹೊಲಗದ್ದೆಗಳು, ಕಾಡುಮೇಡುಗಳು, ಹಳ್ಳ-ಕೊಳ್ಳಗಳು, ಜಾನುವಾರಗಳು ಮುಂತಾದವುಗಳೆಲ್ಲವುಗಳನ್ನು ಒಳಗೊಂಡಿರುತ್ತದೆ.

ಕೋಗಳಿ ಗ್ರಾಮವು ತುಂಗಭದ್ರಾ ನದಿಯ ಉಪನದಿಯಾದ ಹಗರಿ ನದಿಗೆ ಹರಿದು ಬರುವ ಚಿಕ್ಕ ಹಳ್ಳ ಮತ್ತು ಹಗರಿ ಹಳ್ಳದ ನಡುವೆ ಇದೆ. ಈ ಹಗರಿ ನದಿಯನ್ನು ಹಗರಿಬೊಮ್ಮನಹಳ್ಳಿ ತಾಲೂಕಿನ ಮಾಲವಿಯ ಹತ್ತಿರ ಹಗರಿ ಜಲಾಶಯವೆಂದು ಹಗರಿ ಹಳ್ಳಕ್ಕೆ ಅಡ್ಡಲಾಗಿ ಕಟ್ಟಲಾಗಿದೆ. ಇದರ ಬಲದಂಡೆಯಲ್ಲಿಯೇ ಕೋಗಳಿ ಬರುತ್ತದೆ. ದಾವಣಗೆರೆ ಜಿಲ್ಲೆಯಲ್ಲಿ ಹುಟ್ಟಿಕೊಳ್ಳುವ ಈ ಹಗರಿ ಹಳ್ಳವು ಬಳ್ಳಾರಿ ಜಿಲ್ಲೆಯ ತನ್ನ ಮುಕ್ಕಾಲು ಭಾಗ ಉದ್ದ ಸವೆಸಿಕೊಂಡು ಬಂದು ಮಾಲವಿಯ ಹಗರಿ ಜಲಾಶಯವನ್ನು ಸೇರುತ್ತದೆ. ಇಂತಹ ಹಗರಿ ಹಳ್ಳದ ವಲಯದಲ್ಲಿ ಬರುವ ಕೋಗಳಿಯು ಹೊಸಪೇಟೆಯಿಂದ-ಹರಿಹರ ಮಾರ್ಗವಾಗಿ ಹೋಗುವ ರಾಜ್ಯ ಹೆದ್ದಾರಿಯ ದಕ್ಷಿಣಕ್ಕೆ ನೆಲ್ಲುಕುದುರೆಯಿಂದ ಅಥವಾ ಉಲುವತ್ತಿಯಿಂದ ಐದು ಕಿಲೋಮೀಟರ್ ದೂರದಲ್ಲಿದೆ ಹಾಗೂ ಹಡಗಲಿ-ಕೊಟ್ಟೂರಿಗೆ ಹೋಗುವ ರಸ್ತೆಯ ಉತ್ತರಕ್ಕೆ ಮೂರು ಕಿಲೋಮೀಟರ್ ದೂರದಲ್ಲಿದೆ.

ಕೋಗಳಿಯ ಒಟ್ಟು ಭೂ ವಿಸ್ತೀರ್ಣ ೪,೧೭೯-೩೦ ಎಕರೆ. ಇದರಲ್ಲಿ ಪಟ್ಟಾ ಜಮೀನು ೩,೭೦೪-೦೩ ಎಕರೆ ಮತ್ತು ಸರ್ಕಾರಕ್ಕೆ ಸೇರಿದ ಬಂಜರು ಭೂಮಿ ೪೭೫-೨೭ ಎಕರೆಯಾಗಿದೆ. ೩,೭೦೪-೦೩ ಎಕರೆ ಪಟ್ಟ ಜಮೀನಿನಲ್ಲಿ ೧೦ ಎಕರೆಗಳಿಗಿಂತ ಒಳಗಿನ ಪಟ್ಟ ೧,೨೧೨-೭೪ ಎಕರೆಯಾದರೆ, ೧೦ ಎಕರೆಗಳಿಗಿಂತ ಮೇಲ್ಪಟ್ಟ ಪಟ್ಟವು ೨,೪೯೧-೨೯ ಎಕರೆಯಿದೆ. ಒಟ್ಟು ವಿಸ್ತೀರ್ಣದಲ್ಲಿ ಸಾಗುವಳಿ ವಿಸ್ತೀರ್ಣ ೩,೭೦೪-೦೩ ಇದ್ದು, ಇದರಲ್ಲಿ ನೀರಾವರಿ ಭೂಮಿ ೧೦೦೦ ದಷ್ಟು ಎಕರೆ ಮಾತ್ರ, ಉಳಿದದ್ದು ಮಳೆಯಾಶ್ರಿತ ಭೂಮಿಯಾಗಿದೆ. ಉಳಿದ ೪೭೫-೨೭ ಎಕರೆ ಸರ್ಕಾರಿ ಬಂಜರು ಭೂಮಿಯಲ್ಲಿ ಹಳ್ಳ-ಕೊಳ್ಳ, ಗಿಡ-ಮರಗಳು ಬೆಳೆದಿವೆ.

**೨. ಜನಸಂಖ್ಯೆ**

೩೬೨೯ (೨೦೦೪-೦೫ರ ಜನಗಣತಿಯ ಪ್ರಕಾರ) ಗಂಡಸರು ೧೮೭೪ ಜನರು ಮತ್ತು ಹೆಂಗಸರು ೧೭೫೫ ಜನರಿದ್ದಾರೆ. ಇಲ್ಲಿನ ಒಟ್ಟು ಮನೆಗಳ ಸಂಖ್ಯೆ ೯೧೬. ಇದರಲ್ಲಿ ೬ ಆರ್.ಸಿ.ಸಿ. ಮನೆಗಳು, ೬೫೭ ಮಾಳಗಿ ಮನೆಗಳು, ೫೫ ಹಂಚಿನ ಮನೆಗಳು, ೯೯ ಖಾಲಿ ನಿವೇಶನಗಳು, ೧೪ ದೇವಸ್ಥಾನಗಳು ಇವೆ.

ಈ ಊರಿನಲ್ಲಿ ೨ ಕುಡಿಯುವ ನೀರಿನ ಟ್ಯಾಂಕ್‌ಗಳು, ೩ ಮೋಟರ್‌ಗಳು, ೪ ಕೈ ಪಂಪುಗಳು (ದುರಸ್ಥಿಯಲ್ಲಿವೆ) ೧೬ ಬೀದಿ ನಳಗಳು, ೧೬೨ ಮನೆಗಳಿಗೆ ಕುಡಿಯುವ ನೀರಿನ ಸಂಪರ್ಕ ಕಲ್ಪಿಸಲಾಗಿದೆ. ೧೦೦ ಬೀದಿ ದೀಪಗಳು ಇವೆ.

ಕೋಗಳಿಯಲ್ಲಿ ಗ್ರಾಮಪಂಚಾಯ್ತಿ ಕಾರ್ಯಾಲಯವಿದ್ದು, ಅಲ್ಲಿನ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರನ್ನು ಸೇರಿ ೧೫ ಜನರಿದ್ದಾರೆ. ೯ ಜನ ಸಿಬ್ಬಂದಿಯವರು ಕಾರ್ಯ ನಿರ್ವಹಿಸುತ್ತಾರೆ. ಕೋಗಳಿ ಗ್ರಾಮ ಪಂಚಾಯ್ತಿಯು – ಕೋಗಳಿ, ಕೆ. ಕೋಡಿಹಳ್ಳಿ, ನೆಲ್ಲುಕುದುರೆ, ಕನ್ನಿಹಳ್ಳಿ, ಮಾಲವಿ, ಉಲವತ್ತಿ, ಹರೆಗೊಂಡನ ಹಳ್ಳಿ, ದಶಮಾಪುರ, ಹೊಸಕೇರಿ, ಮಾದೂರು,

ಉಪ್ಪಾರಗಟ್ಟಿ, ಅಲಬೂರು, ಅಂಬಳಿ, ಕುಡಿತಿನ ಮಗ್ಗಿ, ಹನಸಿ, ಬೆಣಕಲ್ಲು, ವಲ್ಲಭಾಪುರ, ವರ್ಲಹಳ್ಳಿ ಒಟ್ಟು ೧೮ ಹಳ್ಳಿಗಳನ್ನೊಳಗೊಂಡ ಒಂದು ಫಿರ್ಕಾ ಆಗಿದೆ.

ಈ ಫಿರ್ಕಾ ಅಥವಾ ಹೋಬಳಿಗೆ, ಕೋಗಳಿ, ಅಂಬಳಿ, ಅಲಬೂರು, ಮಾಲವಿ, ಬೆಣಕಲ್ಲು, ದಶಮಾಪುರ, ಹನಸಿ ಈ ಏಳು ಗ್ರಾಮ ಪಂಚಾಯ್ತಿಗಳು ಸೇರುತ್ತವೆ. ಇವು ಏಳು ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿ ಒಂದು ರೈತ ಸಂಪರ್ಕ ಕೇಂದ್ರವನ್ನು ಕೋಗಳಿಯಲ್ಲಿ ಸ್ಥಾಪಿಸಲಾಗಿದೆ. ಇದು ಒಬ್ಬ ಕೃಷಿ ಸಹಾಯಕರನ್ನು ಹೊಂದಿದ್ದು, ಎಲ್ಲಾ ರೈತರಿಗೂ ಕೃಷಿ ಅಭಿವೃದ್ಧಿಯ ಕುರಿತು ತಿಳುವಳಿಕೆಯನ್ನು ನೀಡುತ್ತಾರೆ. ಅಲ್ಲದೆ ಈ ಕೋಗಳಿಯಲ್ಲಿ ಒಂದು ಪ್ರಾಥಮಿಕ ಶಾಲೆ, ಒಂದು ಪ್ರೌಢಶಾಲೆ, ಒಂದು ಪದವಿಪೂರ್ವ ಕಾಲೇಜು, ಒಂದು ಗ್ರಾಮೀಣ ಬ್ಯಾಂಕು, ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ, ಪಶು ಆರೋಗ್ಯ ಕೇಂದ್ರ, ಎಣ್ಣೆಕಾಳು ಸೊಸೈಟಿ, ನ್ಯಾಯಬೆಲೆ ಅಂಗಡಿ, ನಾಲ್ಕು ಹಿಟ್ಟಿನ ಗಿರಣಿಗಳು, ಒಂದು ಅಂಚೆ ಕಛೇರಿ, ಒಂದು ದೂರವಾಣಿ ಕೇಂದ್ರ, ಎರಡು ಅಂಗನವಾಡಿ ಕೇಂದ್ರಗಳು, ಒಂದು ಗ್ರಾಮ ಚಾವಡಿ, ಪಂಚಾಯ್ತಿ ಭವನ, ರಂಗಮಂದಿರ, ಆರು ಕಿರಾಣಿ ಅಂಗಡಿಗಳು, ಹತ್ತಾರು ಡಬ್ಬ ಅಂಗಡಿಗಳು (ಶೆಡ್ಡುಗಳು) ಒಂದು ಗ್ರಂಥಾಲಯ, ಒಂದು ಮಳೆಮಾಪನ ಕೇಂದ್ರ, ಒಂದು ಚೌಕಿ ಸಾಕಾಣಿಕ ಕೇಂದ್ರ (ರೇಷ್ಮೆ ಸಾಕಾಣಿಕ), ಹಾಲಿನ ಡೇರಿ, ಹತ್ತೊಂಬತ್ತು ಮಹಿಳಾ ಮತ್ತು ಐದು ಪುರುಷರ ಒಟ್ಟು ಇಪ್ಪತ್ತನಾಲ್ಕು ಸ್ವಯಂ ಸಹಾಯ ಸಂಘಗಳು, ಮಾರುತಿ ಭಜನಾ ಮಂಡಳಿ, ಮಾರುತಿ ನಾಟ್ಯ ಸಂಘ ಮುಂತಾದವುಗಳು ಇವೆ. ಅಲ್ಲದೆ ಇಲ್ಲಿ ಐವತ್ತು ಜನ ವಿಧವಾ ವೇತನ ಪಡೆಯುವವರು, ನಲವತ್ತೈದು ಜನರಿಗಿಂತ ಹೆಚ್ಚು ಜನ ವೃದ್ಧಾಪ್ಯ ವೇತನ, ಇಪ್ಪತ್ತೈದು ಜನ ಅಂಗವಿಕಲ ವೇತನ, ಮುಂತಾದ ಸರ್ಕಾರಿ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ.

ವ್ಯವಸಾಯದ ಉದ್ದೇಶಕ್ಕಾಗಿ ಒಂದು ನೂರ ಇಪ್ಪತ್ತೆರಡು ಕೊಳವೆ ಬಾವಿಗಳು, ಹತ್ತಾರು ಬೋರ್‌ವೆಲ್‌ಗಳು ಇವೆ. ಸುವ್ಯವಸ್ಥಿತವಾದ ಸಾರಿಗೆ ಸಂಪರ್ಕ, ಕುಡಿಯುವ ನೀರಿನ ವ್ಯವಸ್ಥೆ, ವಿದ್ಯುತ್ ವ್ಯವಸ್ಥೆ ಅಲ್ಲದೆ ಗ್ರಾಮಕ್ಕೆ ಒಂದು ಸ್ಮಶಾನದ ವ್ಯವಸ್ಥೆಯು ಇರುತ್ತದೆ.

**೩. ಕೋಗಳಿ ನಾಮ: ಪದನಿಷ್ಪತ್ತಿ**

ಪ್ರತಿಯೊಂದು ಗ್ರಾಮದ ಹೆಸರಿಗೂ ಐತಿಹಾಸಿಕ ಪರಂಪರೆಯೊಂದು ಇದ್ದೇ ಇರುತ್ತದೆ. ಅದಕ್ಕೆ ಪೂರಕ ಸಾಮಗ್ರಿಯಾಗಿ ಶಾಸನ, ಸಾಹಿತ್ಯಕೃತಿಗಳು ಸಾಕ್ಷಿ ನುಡಿಯುತ್ತವೆ. ಕನ್ನಡ ಭಾಷೆಯನ್ನಾಡುವ ಕರ್ನಾಟಕದ ಸಂದರ್ಭದಲ್ಲಿ ಗ್ರಾಮಗಳು ಬೆಳೆದು ಬಂದ ಇತಿಹಾಸವನ್ನು ರೂಪಿಸಲು ಅನೇಕ ರೀತಿಯ ಸಾಮಗ್ರಿಗಳು ದೊರೆಯುತ್ತವೆ. ಶಾಸನಗಳು, ಸ್ಥಳೀಯ ಐತಿಹ್ಯಗಳು, ಅನೇಕ ಪ್ರಕಾರದ ಗ್ರಾಮ ವಿವರಗಳನ್ನು, ಊರುಗಳ ಇತಿಹಾಸವನ್ನು, ಐತಿಹಾಸಿಕ ಮಹತ್ವವನ್ನು ಮತ್ತು ಸಾಂಸ್ಕೃತಿಕ ಜನ ಜೀವನದ ಒಳನೋಟಗಳನ್ನು ತಿಳಿಸಿಕೊಡುತ್ತವೆ. ಭಾಷಿಕ ಮತ್ತು ಜನಪದೀಯ ಅಂಶಗಳು ಇಲ್ಲಿ ಮುಖ್ಯ ಆಧಾರಗಳಾಗಿವೆ.

ಗತಿಸಿದಂತಹ ಅಥವಾ ನಡೆದು ಹೋದ ಘಟನೆಗಳು ಇತಿಹಾಸ ಅಥವಾ ಚರಿತ್ರೆಯಲ್ಲಿ ದಾಖಲಾದಂತೆ ಈ ಗ್ರಾಮ ನಾಮ ಎಂಬ ಪದದ ಅರ್ಥವು ಚಾರಿತ್ರಿಕ ಹಿನ್ನೆಲೆ, ಅದರ ಗಾತ್ರ, ರಚನೆ, ಸ್ವರೂಪ, ಪ್ರಾಕೃತಿಕ, ಭೌಗೋಳಿಕ, ಸಾಂಸ್ಕೃತಿಕ ಅಂಶಗಳು ಆಯಾ ಊರುಗಳ ಸ್ಥಳ ವಿಶೇಷವನ್ನು ತಿಳಿಯಲು ಮತ್ತು ಆ ಊರಿಗೆ ಇಂತಹ ಹೆಸರು ಹೇಗೆ ಬಂತು ಎನ್ನುವುದನ್ನು ತಿಳಿಯಲು ಸಹಾಯ ಮಾಡುತ್ತವೆ. ಒಂದು ಊರಿನ ಹೆಸರನ್ನು ತಿಳಿಯಲು ಹೆಸರಿನ ವೈವಿಧ್ಯತೆಯಲ್ಲಿ ಗ್ರಾಮಗಳ ಭೌಗೋಳಿಕ, ಪ್ರಾಕೃತಿಕ ಪರಿಸರ ಅವುಗಳ ಚಾರಿತ್ರಿಕ ಹಿನ್ನೆಲೆ, ಅವುಗಳು ಜನ್ಮ ತಳೆದ ಬಗೆಯನ್ನು ವಿವರಿಸುತ್ತವೆ.

ಯಾವುದೇ ಊರಿನ ಹೆಸರುಗಳು ಆ ಭೂಮಿಗೇ ಮಾತ್ರ ಸೀಮಿತವಾಗದೆ ಮಾನವ ಸಮುದಾಯಕ್ಕೂ ಅಂಟಿಕೊಂಡೆ ಬಂದವುಗಳು. ಪಶು ಪಕ್ಷಿಗಳ ಸಂಬಂಧದೊಂದಿಗೆ, ಮರಗಿಡ, ಬಳ್ಳಿಗಳು, ಸಸ್ಯಕ್ಷೇತ್ರ ಪರಿಚಯವು, ಊರು-ಕೇರಿಗಳ ಬೆನ್ನ ಹಿಂದೆಯೇ ತಮ್ಮ ಸ್ವರೂಪ ವೈವಿದ್ಯಗಳನ್ನು ಬಿಚ್ಚಿ ಹೇಳುತ್ತವೆ.

**ಪದನಿಷ್ಪತ್ತಿ**

ಕೊಂಗಳಿ, ಕೊಗಳೆ, ಕೊಗಟಿ, ಕೊಗುಳಿ, ಕೋಗಳಿ ಎಂದು ಇದ್ದು, ಒಂದು ಸೀಮೆಯ ಹೆಸರನ್ನು ಇದು ಸೂಚಿಸುತ್ತದೆ. (ಈಗಿನ ಬಳ್ಳಾರಿ ಜಿಲ್ಲೆಯ ಕೋಗಳಿ).

**ಕೋಗಳಿ ಗಡಿಂಬ:-** ಕೋಗಳಿಯ ಸುತ್ತ ಮುತ್ತ ಪ್ರಚಾರದಲ್ಲಿದ್ದ ಒಂದು ಅಳತೆಗೋಲು ಕೋಗುಳಿ (೧೩-೦೪-೮೯೦) ವಡ್ಡಾರಾಧನೆ.

**ಕೋಗ:-** ಕೋಗು, ಕೋವು, ಮೂಲೆ, ಸಂಧು, ಹಳ್ಳ, ಕೊಲ್ಲಿ, ತಗ್ಗು, ಹೊಲ, ಗದ್ದೆ, ತೋಟ, ತುಡಿಕೆ ಮೊದಲಾದ ವ್ಯವಸಾಯ ಭೂಮಿಗಳಲ್ಲಿ ಒಂದು.

**ಕೋಹು:-** ಪೋಣಿಸುವಿಕೆ, ಪೋಣಿಕೆ, ಸರಣಿ, (ಮಣಿ ಮೊದಲಾದುವುಗಳನ್ನು ನೂಲಿನಿಂದ ಪೋಣಿಸುವುದು).

**ಕೋಗು:-** ಎರಡು ತಿಂಗಳ ಹಿಂದೆ ಬೋಳು ಬೆತ್ತಲೆಯಾಗಿ ಒಣಗಿದ್ದ ಗದ್ದೆಯ ಕೋಗುಗಳು ಇಂದು ಭತ್ತದ ಸಸಿಗಳಿಂದಲೂ ಕಟ್ಟಿ ನಿಲ್ಲಿಸಿದ ನೀರಿನಿಂದಲೂ ಕಳ ಕಳಸಿ ನುಗ್ಗುತ್ತಿದ್ದವು (ಕಾನೂರು ೩೫೬) ಅಲ್ಲಿಯ ಒಂದು ಕೂಗು ಭೂಮಿಯೇ ಕೋಗಳಿ.

ಎರಡು ಗುಡ್ಡಗಳ ನಡುವಿನ ಇಕ್ಕಟ್ಟಾದ ಭೂಮಿಯೇ (ಇಳೆಯೇ ಕೋಗಳಿ) ಕೋಗ+ಇಳೆ=ಕೋಗಳೆ. ಈ ಎಲ್ಲಾ ವಿವರಗಳನ್ನು ನೋಡಿದಾಗ ಕೋಗಳಿಯ ಭೂ ವಿಸ್ತೀರ್ಣವು ಹಳ್ಳ, ಕೊಳ್ಳ, ತಗ್ಗು, ದಿನ್ನೆ, ಮೂಲೆ, ಸಂದಿ, ಹೊಲಗದ್ದೆ, ತೋಟ ಮುಂತಾದವುಗಳನ್ನು ಹೊಂದಿದ್ದು, ಇಲ್ಲಿ ಸದಾ ಹರಿಯುವ ಹಳ್ಳ-ಕೊಳ್ಳಗಳು, ಮಾವು, ಬೇವು, ತಾಳೆ, ತೆಂಗು, ಬಾಳೆ,

ಭತ್ತ ಮುಂತಾದ ಬೆಳೆಗಳನ್ನು ಬೆಳೆಯಲು ಯೋಗ್ಯವಾದ ಪ್ರದೇಶ ಇದಾಗಿದ್ದು, ಕೋಗಳಿಯು ಹಿಂದಿನ ಕಾಲದಲ್ಲಿ ಇಂತಹ ಬೆಳೆಗಳಿಂದ ನಳ ನಳಸಿ ಕಂಗೊಳಿಸುತ್ತಿತ್ತು ಎಂದು ಊರಿನ ಹಿರಿಯರು ಆದ ಕೋಗಳಿ ಎಂ. ಪಂಪಣ್ಣನವರು ನುಡಿಯುತ್ತಾರೆ.

ಕೋಹು:– ಈ ಪದದ ಅರ್ಥದ ಹಿನ್ನೆಲೆಯಲ್ಲಿ ಕೋಗಳಿಯನ್ನು ನೋಡಿದರೆ ಕೋಗಳಿಯ ಸುತ್ತ ಮುತ್ತಲೂ ದಾರದಿಂದ ಮಣಿಗಳನ್ನು ಪೋಣಿಸಿದಂತೆ ಕೋಗಳಿಯನ್ನು ನಡುವೆ ಮಾಡಿಕೊಂಡು ವೃತ್ತಾಕಾರದಲ್ಲಿ ಕನ್ನಿಹಳ್ಳಿ, ಅಲಬೂರು, ಕುಡಿತಿನಿಮಗ್ಗಿ, ಅಂಬಳಿ, ಕೆ.ಕೋಡಿಹಳ್ಳಿ, ಕೆ. ಕೆ. ತಾಂಡ, ವಟ್ಟಮ್ಮನ ಹಳ್ಳಿ, ನೆಲ್ಲುಕುದುರೆ, ಹಂಚಿನಾಳ, ಚಿಮ್ಮನಹಳ್ಳಿ ಮುಂತಾದ ಗ್ರಾಮಗಳು ಸುತ್ತಿಕೊಂಡಿವೆ. ಹೀಗೆ ನಟ್ಟ ನಡುವೆ ಇರುವ ಈ ಊರನ್ನು ಕೋಇಳೆ ಎಂದು ಕರೆದಿರಬಹುದು.

ಕೋಗಳಿಯ ಹಿರಿಯರಾಗಿರುವ ಶ್ರೀಯುತ ಪಂಪಣ್ಣನವರು ಕೋಗಳಿಯ ಕಲ್ಪನೆಯನ್ನು ಹೀಗೆ ಕಟ್ಟಿಕೊಡುತ್ತಾರೆ. ಕ–ಗುಣಿತಾಕ್ಷರಗಳಲ್ಲಿ ಬರುವ ಕೋ ಮಾದರಿಯಲ್ಲಿ ಸುತ್ತಲೂ ಸಣ್ಣ ಸಣ್ಣ ಹಳ್ಳಿಗಳಿಂದ ಕೂಡಿದ ಇಳೆ ಇದಾದ ಕಾರಣ ಕೋ→ಇಳೆ→ಕೋಯಿಳೆ→ಕೋಗಳಿ ಎಂದು ಆಗಿರಬೇಕು ಎನ್ನುತ್ತಾರೆ. ಅಲ್ಲದೆ ಕೋಗಳಿಯನ್ನು ಕೋಗಿಲೆ ಎಂದು ಕೂಡ ಕರೆಯುವುದು ರೂಢಿಯಲ್ಲಿದೆ.

ಕೋಗಿಲೆ:– ಕೋಕಿಲು, ಕೋಕಿಲ, ಒಂದು ಜಾತಿಯ ಹುಳು, ಕೋಗಿಲೆ ಬಾಳೆ, ಕೋಗಿಲೆಯೆಲೆ, ಮಾವಿನ ಹಣ್ಣಿನ ಓಟೆಯ ಒಳಗಿನ ತಿರುಳು.

ಕೋಗಿಲೆ ಬಾಳೆ:– ಅಲಂಕಾರಕ್ಕಾಗಿ ಹೂದೋಟದಲ್ಲಿ ಬೆಳೆದ ಅಲ್ಲದೆ ಬೇರೆ ಬೇರೆ ಕಡೆಗಳಲ್ಲಿ ಬೆಳೆಯಿಸಿದ ಬಣ್ಣ–ಬಣ್ಣದ ಹೂಗಳನ್ನು ಬಿಡುವ ಪುಟ್ಟ ಬಾಳೆ ಗಿಡಗಳನ್ನು ಹೋಲುವ ಒಂದು ಗಿಡ.

ಕೋಕಿಲ:– ಪರಪುಟ್ಟ ತನ್ನ ವಸ್ತುವನ್ನು ಹೆರವರು ಕಾಪಿಡುವಂತೆ ಮಾಡುವ ಯುಕ್ತಿ ಚಮತ್ಕಾರ.

ಕೋಕಿಲನಿನದ:– ಕೋಗಿಲೆಯ ಧ್ವನಿ, ಇಂಚರ, ಕೋಕಿಲಪ್ರಿಯ (ಸಂಗೀತ), ಒಂದು ತಾಳದ ಹೆಸರು. ಈ ಎಲ್ಲಾ ಅರ್ಥಗಳಲ್ಲಿ ಕೋಗಳಿಗೆ ಕೋಗಿಲೆ ಎಂದು ಕರೆದಿರಬಹುದು ಎನ್ನುವುದನ್ನು ವಿಶ್ಲೇಷಿಸಿದಾಗ ಸಂಪೂರ್ಣ ಮಾಹಿತಿ ದೊರೆಯುತ್ತದೆ.

ಕೋಗಳಿಯ ಭೂ ವಿಸ್ತೀರ್ಣದಲ್ಲಿ ಮಾವಿನ ತೋಪುಗಳು ಇದ್ದವು ಎಂದು ತಿಳಿಯುತ್ತದೆ. ಅಲ್ಲಿ ಯತೇಚ್ಛವಾಗಿ ಮಾವಿನ ಹಣ್ಣುಗಳನ್ನು ಬೆಳೆಯುತ್ತಿದ್ದರಂತೆ. ಅಲ್ಲಿ ಬಹಳಷ್ಟು ಕೋಗಿಲೆಗಳು ಮಾವಿನ ತಳಿರನ್ನು ತಿಂದು ದಿನವಿಡೀ ಕೂಗುತ್ತಾ ಹಾಡಿ ನಲಿಯುತ್ತಿದ್ದವಂತೆ ಕಾರಣ ಕೋಗಿಲೆ ಎಂದು ಈ ಊರನ್ನು ಕರೆದಿರಬಹುದು. ಮಾವಿನ ತೋಪು ಎಂದು

ಕರೆಯಿಸಿಕೊಳ್ಳುವ ಭೂಮಿ ಅಲ್ಲಿ ಇದೆ. ಈಗ ಅಲ್ಲಿ ಮಾವಿನ ಮರಗಳು ಇಲ್ಲ. ಅಲಂಕಾರಕ್ಕಾಗಿಯಾದರು ಇಲ್ಲಿ ಬಹಳಷ್ಟು ಜನರು ಮನೆಯ ಮುಂದುಗಡೆ ಅಥವಾ ಹೊಲಗದ್ದೆಗಳಲ್ಲಿ ಬಾಳೆ ಗಿಡವನ್ನು ಹೋಲುವ ಗಿಡವನ್ನು ಬೆಳೆಯುತ್ತಿದ್ದರು ಎನ್ನುವುದು ಇಲ್ಲಿಯ ಹಿರಿಯ ಕೃಷಿಕರಿಂದ ತಿಳಿಯುತ್ತದೆ.

**ಕೋಕಿಲ:–ಪರಪುಟ್ಟ–** ಇಲ್ಲಿಯ ಜನತೆ ಚಮತ್ಕಾರವನ್ನು ಹೊಂದಿದವರು. ಇತರರ ಸಂಕಷ್ಟಗಳಿಗೆ ಸಹಾಯ ಮಾಡುವವರು ಮತ್ತು ಧರ್ಮದಿಂದ ಒಬ್ಬರನ್ನೊಬ್ಬರು ಕಾಪಾಡಿಕೊಂಡವರು ಎನ್ನುವುದು ಶಾಸನಗಳಿಂದ ತಿಳಿಯುತ್ತದೆ.

**ಕೋಕಿಲನಿನದ:–** ಕೋಗಳಿಯಲ್ಲಿ ಕೋಗಿಲೆಯ ಕಂಠವನ್ನು ಹೋಲುವ ಸಂಗೀತಗಾರರು, ಕಲಾವಿದರು, ನಾಟಕಕಾರರು, ಹಾಡುಗಾರರು ಹಿಂದಕ್ಕೆ ಇದ್ದರು ಎನ್ನುವುದು ತಿಳಿಯುತ್ತದೆ. ಇಂದಿಗೂ ಕೂಡ ಇದ್ದಾರೆ. ದಿ॥ ಜೆ. ಎಂ. ಗುರುಸಿದ್ದಯ್ಯ ಎನ್ನುವ ಹಿರಿಯರು ಸಂಗೀತ ಲೋಕದಲ್ಲಿ ಹೆಸರು ಮಾಡಿ ಹೋಗಿದ್ದಾರೆ. ಇವರು ಹಲವಾರು ಸಂಗೀತ ವಿದ್ಯಾರ್ಥಿಗಳನ್ನು ಒಟ್ಟುಗೂಡಿಸಿ ಪ್ರಾಥಮಿಕ ಹಂತದ ಸಂಗೀತಾಭ್ಯಾಸ ಮಾಡಿಸಿ, ಗದುಗಿನ ಮಠಕ್ಕೆ ಬಿಟ್ಟು ಬರುತ್ತಿದ್ದರಂತೆ. ಅಂತಹ ವಿದ್ಯಾರ್ಥಿಗಳಲ್ಲಿ ಇಂದು ಕರ್ನಾಟಕದಲ್ಲಿ ವಾಯಿಲಿನ್ ವಾದನದ ಮುಖಾಂತರ ಹೆಸರು ಮಾಡಿರುವ ಶ್ರೀ ಈಶ್ವರ್ ಮೋರಿಗೇರಿ ಒಬ್ಬರು. ಇವರು ಸಂಗೀತ ಲೋಕದಲ್ಲಿ ಬಹಳಷ್ಟು ಹೆಸರು ಮಾಡಿದ್ದಾರೆ. ಅಂತೆಯೇ ದಿ॥ ಜೆ. ಎಂ. ಗುರುಸಿದ್ದಯ್ಯನವರ ಸ್ಮರಣಾರ್ಥ ಪಂಡಿತ್ ಪುಟ್ಟರಾಜ ಗವಾಯಿಗಳ ಪುಣ್ಯ ತಿಥಿಯನ್ನು ಪ್ರತಿವರ್ಷ ಡಿಸೆಂಬರ್ ತಿಂಗಳಲ್ಲಿ ಮೂರು ದಿನಗಳ ಕಾಲ ರಾಜ್ಯದ ವಿವಿದೆಡೆಯಿಂದ ಕಲಾವಿದರನ್ನು ಕರೆಯಿಸಿ ಸಂಗೀತ ಸೇವೆಯನ್ನು ಶ್ರೀ ಕೋಗಳಿ ಪಂಪಣ್ಣನವರ ನೇತೃತ್ವದಲ್ಲಿ ನಡೆಯಿಸಿಕೊಂಡು ಬಂದಿದ್ದಾರೆ.

ದಿ॥ ಜೆ. ಎಂ. ಗುರುಸಿದ್ಧಯ್ಯನವರು ರಂಗಕರ್ಮಿ ಹಾಗೂ ಖ್ಯಾತ ರಾಜಕಾರಣಿ ಈಗಿನ ಗೃಹ ಸಚಿವರು ಆಗಿರುವ ಎಂ. ಪಿ. ಪ್ರಕಾಶರಿಗೆ ಹತ್ತಿರದ ಸಂಬಂಧಿಗಳಾಗಿರುವರು. ಸಂಗೀತಕ್ಕಾಗಿ ಸೇವೆ ಮಾಡಿದ ಇವರ ಪುಣ್ಯ ತಿಥಿಗೆ ತಮ್ಮ ಸೇವೆಯನ್ನು ಮಾಡುತ್ತಾ ಬಂದಿದ್ದಾರೆ. ಜೊತೆಗೆ ದಿ॥ಗುರುಸಿದ್ಧಯ್ಯನವರ ಮೊಮ್ಮಕ್ಕಳು, ಊರಲ್ಲಿ ಇದ್ದು ಈ ಕಾರ್ಯಕ್ರಮಕ್ಕೆ ಸಹಾಯ ಮಾಡುತ್ತಾರೆ.

ಈ ಊರಿನಲ್ಲಿ ಹಲವಾರು ಜನರು ಸಂಗೀತಾಸಕ್ತರು, ಸಂಗೀತ ಕ್ಷೇತ್ರದಲ್ಲಿ ಹೆಸರು ಮಾಡಿದವರು ಇದ್ದಾರೆ. ಕೋಗಳಿಯ ಹಲವಾರು ಮನೆಗಳಲ್ಲಿ ಸಂಗೀತದ ವಾದ್ಯಗಳು ಹಾರ್ಮೊನಿಯಂ, ತಬಲ, ಮುಂತಾದವುಗಳು ಕಾಣ ಸಿಗುತ್ತವೆ.

ಒಟ್ಟಾರೆ ಇಲ್ಲಿಯ ಜನರು ಸಂಗೀತ ಪ್ರಿಯರು, ಕೋಗಿಲೆಯ ಕಂಠದಂತಹ ಧ್ವನಿ ಇರುವವರು ಎನ್ನುವುದು ತಿಳಿಯುತ್ತದೆ. ಅಂತೆಯೇ ಇಂದಿಗೂ ಊರಲ್ಲಿ ಸಂಗೀತ ಪಾಠ ಶಾಲೆ

ಇದ್ದು, ಅಲ್ಲಿನ ಮಕ್ಕಳಿಗೆ ಪಂಡಿತ್ ವಿರುಪಾಕ್ಷಾಚಾರಿ, ಅಂಬಳಿಯ ದೇವರಾಜ ಗವಾಯಿಗಳು ಸಂಗೀತ ಪಾಠ ಹೇಳಿಕೊಡುತ್ತಾರೆ. ಈ ಎಲ್ಲಾ ಕಾರಣಗಳಿಂದ ಕೋಗಳಿಗೆ ಕೋಗಿಲೆ ಎಂತಲೂ ಕರೆಯುತ್ತಿರಬಹುದು ಎನಿಸುತ್ತದೆ. ಈ ಕಾರಣದಿಂದಲೇ ರಂಗಭೂಮಿಯಲ್ಲಿ ಬಹು ದೊಡ್ಡ ಹೆಸರು ಮಾಡಿದ ಶ್ರೀ ಕೋಗಳಿ ಪಂಪಣ್ಣನವರು ದೊಡ್ಡ ನಾಟಕ ಕಲಾವಿದರಷ್ಟೇ ಅಲ್ಲ ಸಾಹಿತಿಗಳು ಕೂಡ. ಇವರ ಹಲವಾರು ಕವನ ಸಂಕಲನಗಳಲ್ಲಿ ಕವನಗಳ ಕೊನೆಗೆ ಕೋಗಿಲೆಯ ಕುವರ, ಎಂದು ಬರೆಯುತ್ತಾರೆ. ಎಂ. ಪಿ. ಕೋಗಿಲೆ ಎಂತಲೇ ಕಾವ್ಯನಾಮದಿಂದ ಕಾವ್ಯ ಸೃಷ್ಟಿಸಿದವರು.

**೪. ಸಮುದಾಯಗಳು**

ಜಾನಪದ ಕೇವಲ ವೃತ್ತಿ ಅಥವಾ ಭೌಗೋಳಿಕ ಪರಿಸ್ಥಿತಿಯನ್ನು ಅನುಸರಿಸಿಯಷ್ಟೇ ಬೆಳೆಯುವುದಿಲ್ಲ ಮತ್ತು ವೈವಿಧ್ಯಗೊಳ್ಳುವುದಿಲ್ಲ. ಅದರ ನಡುವೆ ವಿವಿಧ ಸಮುದಾಯಗಳ ಸಂಬಂಧವು ಮುಖ್ಯವಾಗಿರುತ್ತದೆ. ಕಾರಣ ಇವೆಲ್ಲ ಪರಸ್ಪರ ಅಂತರ್ ಸಂಬಂಧಿಗಳು. ಭಾರತೀಯ ಸಂದರ್ಭದಲ್ಲಿಯಂತೂ ಸಮುದಾಯ ಬಲಿಷ್ಠವಾದ ಒಂದು ಸಾಮಾಜಿಕ ಗುಣವಾಗಿದ್ದು ಸಾಂಸ್ಕೃತಿಕವಾಗಿ ಹಲವು ಅಂಶಗಳನ್ನು ನಿಯಂತ್ರಿಸುವ, ನಿರ್ಮಿಸುವ ವಿಶೇಷತೆಯನ್ನು ಸಮುದಾಯದ ಹೊಂದಿರುತ್ತದೆ. ಇಷ್ಟಲ್ಲದೆ ಸಮುದಾಯದ ಬಗೆಗೆ ಆಯಾ ಸಮುದಾಯಗಳಲ್ಲಿರುವ ನಂಬಿಕೆ, ಐತಿಹ್ಯ, ಪುರಾಣಗಳು ಜಾನಪದ ಅಧ್ಯಯನಕ್ಕೆ ಮುಖ್ಯ ಅಂಗವೇ ಆಗಿರುತ್ತವೆ. ಕೋಗಳಿ ಗ್ರಾಮದಲ್ಲಿ ಎಲ್ಲಾ ಸಮುದಾಯದ ಜನರು ವಾಸವಾಗಿದ್ದಾರೆ. ಪರಿಶಿಷ್ಟ ಜನರು (ಎಸ್.ಸಿ), ಪರಿಶಿಷ್ಟ ಪಂಗಡದವರು (ಎಸ್.ಟಿ), ನಾಯಕರು, ಕುರುಬರು, ಅಕ್ಕಸಾಲಿಗರು, ವೀರಶೈವರು, ಕಮ್ಮಾರರು, ಬಡಿಗೇರು, ನೇಕಾರರು, ಮಡಿವಾಳರು, ಬಾರಿಕರು, ಬೆಸ್ತರು, ಶ್ಯಾನುಬೋಗರು, ಗೌಡರು, ಗಾಣಿಗ, ಹಡಪದವರು, ಚಲವಾದಿಗಳು, ಜಂಗಮರು, ಮುಸಲ್ಮಾನರು ಮುಂತಾದ ಜನರಿದ್ದಾರೆ. ಆದರೆ ಬ್ರಾಹ್ಮಣರು ಮಾತ್ರ ಕೋಗಳಿಯಲ್ಲಿ ಕಾಣಸಿಗುವುದಿಲ್ಲ. ಹಿಂದಕ್ಕೆ ಒಂದೇ ಒಂದು ಬ್ರಾಹ್ಮಣರ ಮನೆಯು ಇತ್ತಂತೆ, ಅವರು ಒಬ್ಬರೇ ಅಲ್ಲಿ ಇರದೇ ಬ್ರಾಹ್ಮಣರು ಬಹಳಷ್ಟು ಜನರಿರುವ ಊರಿಗೆ ಹೋಗಿರಬಹುದು ಎನ್ನುವುದು ಊರಿನವರ ಅಂಬೋಣ. ಮುಸಲ್ಮಾನರ ಮನೆಗಳು ಕೇವಲ ಎರಡು ಅಥವಾ ಮೂರು ಇವೆ. ಇವರು ಊರಿನವರ ಜೊತೆಗೆ ಸೇರಿ ಎಲ್ಲಾ ಹಬ್ಬ, ಜಾತ್ರೆಗಳಲ್ಲಿ ಭಾಗವಹಿಸುತ್ತಾರೆ. ಹಾಗೆಯೇ ಊರಿನ ಎಲ್ಲಾ ಜನರು ಕೂಡ ಮುಸಲ್ಮಾನ ಪರ ಹಬ್ಬಗಳನ್ನು ಆಚರಿಸುತ್ತಾರೆ. ಉಳಿದ ಮೇಲಿನ ಎಲ್ಲಾ ಸಮುದಾಯದವರ ಆರಾಧ್ಯದೈವ ಕೋಗಳಿಯ ಆಂಜನೇಯ ಸ್ವಾಮಿಯೇ ಆಗಿರುತ್ತದೆ. ಆಂಜನೇಯನಿಗೆ ಸಂಬಂಧಿಸಿದ ಎಲ್ಲಾ ಆಚರಣೆಗಳಲ್ಲಿ ಇವರೆಲ್ಲರು ಭಾಗವಹಿಸಿ ಸಹೋದರ ಭಾವನೆಯಿಂದ ಬೆರೆತು ಸೌಹಾರ್ಧತೆಯನ್ನು ಮೆರೆಯುತ್ತಾರೆ. ಒಂದಾಗಿ ಬಾಳುತ್ತಾರೆ. ಆದಾಗ್ಯೂ ನಾಯಕ ಜನಾಂಗದವರು ಆಂಜನೇಯನನ್ನು ಮನೆದೇವರಾಗಿ ಪೂಜಿಸುತ್ತಾರೆ. ಸುತ್ತಮುತ್ತಲಿನ ಊರುಗಳ ನಾಯಕರಿಗೆ ಕೋಗಳಿ ಆಂಜನೇಯ ಮನೆದೇವರು ಆಗಿದ್ದಾನೆ.

೫. ವೃತ್ತಿ

ವ್ಯವಸಾಯವೇ ಪ್ರಮುಖ ಉದ್ಯೋಗವಾಗಿರುವ ಕೋಗಳಿಯಲ್ಲಿ ವ್ಯವಸಾಯದಿಂದ ಗ್ರಾಮದಲ್ಲಿ ಮುಖ್ಯವಾಗಿ ಸೂರ್ಯಕಾಂತಿ, ಜೋಳ, ಮೆಕ್ಕೆಜೋಳ, ಶೇಂಗಾ, ಹತ್ತಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಮುಖ್ಯ ಉದ್ಯೋಗ ವ್ಯವಸಾಯವೇ ಆಗಿದ್ದರೂ, ಹಲವಾರು ಗುಡಿಕೈಗಾರಿಕೆಗಳು ಜೀವಂತವಾಗಿವೆ. ಕಮ್ಮಾರರು, ಬಡಿಗೇರು, ಕುಂಬಾರರು ತಮ್ಮ ತಮ್ಮ ಉದ್ಯೋಗದಲ್ಲಿಯೇ ಮುಂದುವರಿದುಕೊಂಡು ಬಂದಿದ್ದು, ಕುಟುಂಬದಲ್ಲಿ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುತ್ತಿದ್ದಾರೆ. ಇವರು ತಮ್ಮ ಕುಲ ಕಸುಬುಗಳಿಂದಲೇ ಜೀವನವನ್ನು ನಡೆಸುತ್ತಿದ್ದಾರೆ. ಇಂದು ವೈಜ್ಞಾನಿಕವಾಗಿ ಮುಂದುವರಿದಿರುವ ಸಮಯದೊಳಗೆ, ನಗರೀಕರಣದ ವಾಸನೆಯಿಂದಾಗಿ ಇಲ್ಲಿಯ ಜನರು ಜೀವನದ ದಿಕ್ಕನ್ನು ಬದಲಿಸಿಕೊಂಡಿದ್ದಾರೆ. ಅಡುಗೆ ಮಾಡುವುದಕ್ಕಾಗಿ ಸ್ಟೀಲ್, ತಾಮ್ರ, ಅಲ್ಯುಮಿನಿಯಂನಂತಹ ಸಾಮಾನುಗಳಿಗೆ ಮಾರು ಹೋಗಿರುವುದರಿಂದ ಕುಂಬಾರರು ತಮ್ಮ ವೃತ್ತಿಯಲ್ಲಿ ಅವನತಿಯ ಹಂತದಲ್ಲಿದ್ದಾರೆ. ಹಾಗಾಗಿ ಅವರೂ ಕೂಡ ಮಕ್ಕಳಿಗೆ ವ್ಯವಸಾಯವನ್ನು ಮಾಡುವಂತೆ, ವಿದ್ಯಾಭ್ಯಾಸ ಕಲಿತು ನಗರ ಪ್ರದೇಶಗಳಲ್ಲಿ ಉದ್ಯೋಗ ಹುಡುಕಿಕೊಳ್ಳುವುದಕ್ಕೆ ಅನುವು ಮಾಡಿಕೊಡುತ್ತಿದ್ದಾರೆ. ಅಕ್ಕಸಾಲಿಗರಂತೂ ಪೂರ್ತಿ ತಮ್ಮ ಕೈಕೆಲಸವನ್ನು ಕೈಬಿಟ್ಟು ಬಿಟ್ಟಿದ್ದಾರೆ. ನಗರ ಪ್ರದೇಶದ ಸಹವಾಸ ಮಾಡಿದ್ದರೂ, ನಗರೀಕರಣಕ್ಕೆ ಒಳಗಾಗಿದ್ದರೂ, ತಾಂತ್ರಿಕವಾಗಿ ಮುಂದುವರೆದಿದ್ದರೂ ಕೋಗಳಿಯ ಜನರಿಗೆ ವ್ಯವಸಾಯ ಮಾಡುವುದಕ್ಕೆ ಬೇಕಾಗುವ ಬಂಡಿ, ನೇಗಿಲು, ಕುಂಟೆ, ರಂಟೆ ಮುಂತಾದ ವ್ಯವಸಾಯದ ಸಾಮಾನುಗಳನ್ನು ಊರಿನ ಬಡಿಗೇರು ಮಾಡಿಕೊಡಬೇಕಾಗಿರುತ್ತದೆ. ಅವರನ್ನೇ ಜನರು ನಂಬಿಕೊಂಡಿರುವುದರಿಂದ ಬಡಿಗ ಸಮುದಾಯ ಇನ್ನೂ ಜೀವಂತವಾಗಿ ಉಳಿದುಕೊಂಡು ಬಂದಿದೆ. ಇಂದು ನಗರ ವಾಸಕ್ಕೆ ನಗರ ಜೀವನದ ರೀತಿನೀತಿಗಳಿಗೆ ಮಾರು ಹೋಗುತ್ತಿರುವ ಸಂದರ್ಭದಲ್ಲಿ ಇಂತಹ ಕುಲಕಸುಬನ್ನೆ ನಂಬಿಕೊಂಡಿರುವ ಜನತೆ ಏಳು–ಬೀಳುಗಳನ್ನು ಅನುಭವಿಸುತ್ತಾ ಬಂದಿದೆ. ಏನೇ ಆದರೂ ಈ ಊರಿನಲ್ಲಿ ವ್ಯವಸಾಯ ಮುಖ್ಯ ಕೆಲಸವಾಗಿ ಕಂಡು ಬರುತ್ತದೆ.

೬. ಚಾರಿತ್ರಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ಒಂದು ಚಿಕ್ಕ ಹಳ್ಳಿಯೇ ಕೋಗಳಿ. ಹಿಂದೆ ಇದು ಕೋಗಳಿ ೫೦೦ ಎಂದು ಕರೆಯಿಸಿಕೊಂಡಿದ್ದು, ಕರ್ನಾಟಕದ ಚರಿತ್ರೆಯಲ್ಲಿ ಅತ್ಯಂತ ಪ್ರಜ್ವಲಮಾನವಾಗಿ ಬೆಳಗಿದ ನಾಡು ಇದಾಗಿತ್ತು ಎಂದು ಚರಿತ್ರೆಯಿಂದ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಕೋಗಳಿಯು ತನ್ನ ಸುತ್ತ ಮುತ್ತಲಿನ ೫೦೦ ಗ್ರಾಮಗಳಿಗೆ ರಾಜಧಾನಿಯಾಗಿತ್ತು. ಆದ್ದರಿಂದ ಕೋಗಳಿ ೫೦೦ ಎಂದೇ ಖ್ಯಾತಿ ಪಡೆದಿತ್ತು. ಅನೇಕ ರಾಜವಂಶಗಳ ಪ್ರಸಿದ್ಧ ರಾಜರುಗಳು ಕೋಗಳಿಯನ್ನು ಆಳಿದ ಉಲ್ಲೇಖಗಳು ಇವೆ. ನಾಡಿನ ಧಾರ್ಮಿಕ, ಸಾಂಸ್ಕೃತಿಕ ಚರಿತ್ರೆಯಲ್ಲಿ ಇದು ತನ್ನದೇ ಆದ ಸ್ಥಾನವನ್ನು ಪಡೆದಿದೆ.

ಕರ್ನಾಟಕದ ಪ್ರಥಮ ಕನ್ನಡಿಗ ಚಕ್ರವರ್ತಿಗಳೆಂಬ ಹೆಗ್ಗಳಿಕೆಗೆ ಪಾತ್ರರಾದ ಕದಂಬರು ಪಲ್ಲವರನ್ನು ಸೋಲಿಸಿ ಬನವಾಸಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಸುಮಾರು ಕ್ರಿ. ಶ. ೩೨೫ ರಿಂದ ಕ್ರಿ. ಶ. ೫೪೦ರವರೆಗೆ ಎರಡುನೂರು ವರ್ಷಗಳವರೆಗೆ ಚಕ್ರವರ್ತಿಗಳಾಗಿ ಮೆರೆದಿದ್ದಾರೆ. ಈ ಅವಧಿಯಲ್ಲಿ ತಮ್ಮ ಸಾಮ್ರಾಜ್ಯದ ವಿವಿಧ ಭಾಗಗಳನ್ನು ಆಳಲು ತಮ್ಮ ವಂಶದವರನ್ನು ನೇಮಿಸಿದ್ದು, ಈ ಅರಸರೇ ಮುಂದೆ ಅಲ್ಲಲ್ಲಿ ಮಹಾಮಂಡಳೇಶ್ವರರಾಗಿ ಮತ್ತೆ ಕೆಲವರು ಮಹಾಸಾಮಂತರಾಗಿ ಭಿನ್ನ ಭಿನ್ನ ವಂಶದ ಚಕ್ರವರ್ತಿಗಳಿಗೆ, ಮಹಾಮಂಡಳೇಶ್ವರರಿಗೆ ಅಧೀನರಾಗಿ ಆಳುತ್ತಿದ್ದರು. ಹೀಗೆ ಆಳಿದ ಕದಂಬ ವಂಶದ ಆರು ಮನೆತನಗಳನ್ನು ಡಾ. ಬಿ. ಆರ್. ಗೋಪಾಲ ಅವರು ಗುರುತಿಸಿದ್ದು, ಅವು ೧) ಹಾನಗಲ್ಲಿನ ಕದಂಬರು ೨) ಗೋವೆಯ ಕದಂಬರು ೩) ಬಯಲು ನಾಡಿನ ಕದಂಬರು ೪) ನೂರಾಂಬಾಡದ ಕದಂಬರು ೫) ಕರಡಿ ಕಲ್ಲಿನ ಕದಂಬರು ೬) ಚಂದ್ರವಾರದ ಕದಂಬರು. ಡಾ. ಗೋಪಾಲ ಅವರು ಬಳ್ಳಾರಿ ಜಿಲ್ಲೆಯ ಕೋಗಳಿ ನಾಡಿನ ಕದಂಬ ಶಾಖೆಯನ್ನು ಗುರುತಿಸಿಲ್ಲ. ಕೋಗಳಿ ನಾಡಿನ ಕದಂಬರು ಎರಡುನೂರು ವರ್ಷಗಳಿಗೂ ಮೇಲ್ಪಟ್ಟು ಆಳಿ, ಈ ಜಿಲ್ಲೆಯ ಸಂಸ್ಕೃತಿಗೆ ತಮ್ಮದೇ ಆದ ಕಾಣಿಕೆ ನೀಡಿದ್ದಾರೆ.

ರಾಷ್ಟ್ರಕೂಟರ ಕಾಲದಲ್ಲಿ ಬಳ್ಳಾರಿ ಜಿಲ್ಲೆಯ ಕದಂಬರು ಯಾವ ಅಧಿಕಾರವನ್ನು ಹೊಂದದೇ ಸಾಮಾನ್ಯರಂತೆ ಜೀವಿಸುತ್ತಿದ್ದುದು ತಿಳಿದು ಬರುತ್ತದೆ. ಹರಪನಹಳ್ಳಿ ತಾಲೂಕಿನ ಕಡಬಗೆರೆಯ ಕ್ರಿ. ಶ. ೯೨೨ರ ಸೆಪ್ಟಂಬರ್ ೯ರ ಶಾಸನದಲ್ಲಿ ರಾಷ್ಟ್ರಕೂಟ ಚಕ್ರವರ್ತಿ ಇಂದ್ರಬಲ್ಲಹ (ಮೂರನೇ ಇಂದ್ರ) ಆಳುತ್ತಿರುವಾಗ ಆತನ ಅಧೀನನಾಗಿ, ಮಹಾಸಾಮಂತ, ಬಿರುದರ ರೊಟ್ಟ ಶ್ರೀಮತ್‌ಬಿಜ್ಜನು ಕೋಗಳಿ ೫೦೦ ಮಾಸವಾಡಿ ೧೪೦ ಆಳುತ್ತಿರುತ್ತಾನೆ. ಅಂತೆಯೇ ಬಳ್ಳಾರಿ ಜಿಲ್ಲೆಯ ಪ್ರದೇಶದಲ್ಲಿ ಯಾವುದೇ ಅಧಿಕಾರ ಹೊಂದಿದಂತೆ ಕಂಡುಬರುವುದಿಲ್ಲ.

ಕಲ್ಯಾಣದ ಚಾಲುಕ್ಯರು ರಾಷ್ಟ್ರಕೂಟರನ್ನು ಸೋಲಿಸಿ ಚಕ್ರಾಧಿಪತ್ಯವನ್ನು ವಹಿಸಿಕೊಂಡಾಗ ಬಳ್ಳಾರಿ ಜಿಲ್ಲೆಯಲ್ಲಿ ಕೆಲವು ಬದಲಾವಣೆಗಳಾದವು. ಕಲ್ಯಾಣದ ಚಾಲುಕ್ಯರಿಂದ ಕೋಗಳಿ ನಾಡಿನ ಒಡೆತನವು ಕದಂಬ ವಂಶದವರಿಗೆ ಪ್ರಾಪ್ತವಾಯ್ತು. ರಾಷ್ಟ್ರಕೂಟರನ್ನು ಸೋಲಿಸುವಲ್ಲಿ ಕಲ್ಯಾಣದ ಚಾಲುಕ್ಯರಿಗೆ ಕದಂಬ ವಂಶದ ಆಯ್ತುವರ್ಮನು ನೆರವಾಗಿರಬೇಕು. ಕಾರಣ ವಿಜಯಿಯಾದ ಇಮ್ಮಡಿ ತೈಲಪನು ಆಯ್ತುವರ್ಮನನ್ನು ಕೋಗಳಿ ನಾಡಿನ ಮಹಾಸಾಮಂತನನ್ನಾಗಿ ನೇಮಿಸಿರಬೇಕು. ಈ ರೀತಿಯ ಉಪಲಬ್ಧ ಆಧಾರದಿಂದ ಆಯ್ತುವರ್ಮನು ಕೋಗಳಿ ನಾಡಿನ ಪ್ರಭುವಾಗಿ ಕದಂಬ ವಂಶವನ್ನು ಸ್ಥಾಪಿಸಿರಬಹುದು. ಇವನ ವಂಶದವರೇ ಕೋಗಳಿ ನಾಡಿನ ಕದಂಬರರು ಆಗಿ ಮೆರೆದಿದ್ದಾರೆ.

ಕೋಗಳಿ ನಾಡಿನ ಕದಂಬರು ಆರಂಭದಲ್ಲಿ ನೊಳಂಬ ಪಲ್ಲವರಿಗೆ ಆದೀನರಾಗಿದ್ದರು. ನಂತರ ನೊಳಂಬವಾಡಿ ನಾಡಿನ ಒಡೆತನವು ಪಾಂಡ್ಯರಿಗೆ ಲಭಿಸಿದ ಮೇಲೆ ಪಾಂಡ್ಯರ ಅಧೀನವಾಗಿ ಇವರು ಆಳಿದ್ದಾರೆ. ನೊಳಂಬ ಪಲ್ಲವರ ಕಾಲದಲ್ಲಿ ಮಹಾಸಾಮಂತರಾಗಿ ಕೋಗಳಿ

ನಾಡನ್ನು ಆಳಿದರೆ, ಪಾಂಡ್ಯರ ಕಾಲದಲ್ಲಿ ಮಹಾಮಂಡಳೇಶ್ವರರಾಗಿ ಕೋಗಳಿ ನಾಡನ್ನು ಆಳಿದ್ದಾರೆ. ಇವರು ಸಮರ್ಥವಾಗಿ ಆಡಳಿತ ನಡೆಸಿದ್ದರಿಂದ ತಮ್ಮ ಮೇಲಿನ ಪ್ರಭುಗಳಿಗೆ ನಿಷ್ಠಾವಂತರಾಗಿದ್ದುದರಿಂದ ಮಹಾಸಾಮಂತ ಸ್ಥಾನದಿಂದ ಮಂಡಳೇಶ್ವರರ ಸ್ಥಾನಕ್ಕೇರುತ್ತಾರೆ. ಇವರು ದೇವಾಲಯ, ಜಿನಾಲಯಗಳಿಗೆ ದತ್ತಿ ದಾನಗಳನ್ನು ಬಿಟ್ಟಿದ್ದಾರೆ.

ಈ ಹಿನ್ನೆಲೆಯಲ್ಲಿ ಮಹಾಸಾಮಂತ ಆಯ್ತವರ್ಮ (ಆದಿತ್ಯವರ್ಮರಸ)ನು ಕೋಗಳಿ ನಾಡಿನಲ್ಲಿ ಒಬ್ಬ ದಕ್ಷ ಸಾಮಂತನಾಗಿ ಮೆರೆದಿದ್ದಾನೆ. ಕಲ್ಯಾಣದ ಚಾಲುಕ್ಯರ ಚಕ್ರವರ್ತಿ ಇಮ್ಮಡಿ ತೈಲಪ ಚಕ್ರವರ್ತಿಯಾಗಿ ಆಳುತ್ತಿರುವಾಗ ಆತನ ಪಾದಪದ್ಮೋಪ ಜೀವಿಯಾಗಿ ಆಯ್ತವರ್ಮನು ಕಿಸುಕಾಡು ೭೦, ಕೋಗಳಿ ೫೦೦ರನ್ನು ಆಳುತ್ತಿದ್ದನು. ಕೋಗಳಿಯ ಶಾಸನದಲ್ಲಿ (೯೯೨ ಡಿಸೆಂಬರ್ ೨೩) ಮಹಾಸಾಮಂತನ್ ಅನೇಕರ್ ಪ್ರಣುತೋನ್ನತ ಲಲಾಟ, ನಿರೀಕ್ಷಣೋಪಲಕ್ಷಿತ ಕದಂಬ ಕಲಾಚಳೋದಿತಾದಿತ್ಯಂ ಪರಮೇಶ್ವರ ಮಕುಟ ಘಟ್ಟಿತಚರಣಾರವಿನ್ದಂ ಶಾಖಾಮೃಗ ಧ್ವಜನುತ್ತುಂಗ ಸಿಂಘಲಾಛನಂ ಮಹಾಪಟು ಪಟಹರವ ಪ್ರಪೂರ್ಣ್ಣದಿಗನ್ತರಾಳ ವಿರಾಜಮಾನ ಚತುರಾಶೀಲೆ ನಗರಾಧಿಷ್ಠಿತಂ ದಶಾಶ್ವಮೇಧಾದೀಕ್ಷಿತ ಕುಳ ಪ್ರಸೂತಂ ಬನವಾಸಿ ಪುರವರೇಶ್ವರಂ ಎಂದು ಮೊದಲಾಗಿ ಪ್ರಶಸ್ತಿಯನ್ನು ಕೊಟ್ಟು ಈತನು ಕೋಗಳಿ ೫೦೦ ಸುಂದವತ್ತಿ ೧೨ನ್ನು ಆಳುತ್ತಿದ್ದನೆಂದು ಹೇಳಲಾಗಿದೆ.

ಆಯ್ತವರ್ಮನ ಕಾಲದಲ್ಲಿ ಕೋಗಳಿ ೫೦೦ರಲ್ಲಿ ಬಿಗಿಯಾದ ಕಾನೂನಿನ ವ್ಯವಸ್ಥೆ ಇತ್ತು. ಕಾನೂನು ಮೀರಿ ನಡೆದವರಿಗೆ ಶಿಕ್ಷೆ ದಂಡಗಳು ತಪ್ಪಿದ್ದಲ್ಲ. ಹೀಗಾಗಿ ಈತನ ಕಾಲದಲ್ಲಿ ಕೋಗಳಿ ನಾಡಿನೊಳಗೆ ಕಳ್ಳತನ, ಮೋಸ, ವಂಚನೆ, ಹಾದರತನ ಮೊದಲಾದ ಸಾಮಾಜಿಕ ಪಿಡುಗುಗಳಿಗೆ ಅವಕಾಶ ಇದ್ದಿಲ್ಲ. ಕೋಗಳಿಯ ಶಾಸನದಲ್ಲಿ ಈತನು ಜಾರಿಗೆ ತಂದ ಕಾನೂನುಗಳ ಯಾದಿ ಇದೆ. ಹೀಗೆ ಹಲವಾರು ಮಹಾಮಂಡಳೇಶ್ವರರು ಕೋಗಳಿ ೫೦೦ರನ್ನು ಆಳಿದಂತಿದ್ದು, ಇವರು ಕೋಗಳಿ ಸುತ್ತಲೂ ಇರುವ ಕೊಟ್ಟೂರು, ಅಂಬಳಿ, ಅಲಬೂರು, ಬಾಗಳಿ ಮುಂತಾದ ಸ್ಥಳಗಳಲ್ಲಿ ದೇವಾಲಯಗಳನ್ನು, ಜೈನ ಬಸದಿಗಳನ್ನು ನಿರ್ಮಿಸಿದಂತೆ ತೋರುತ್ತದೆ. ಕೋಗಳಿಯಲ್ಲಿಯೂ ಕೂಡ ಜೈನ ಬಸದಿ ಇದ್ದು, ಈ ಊರು ಪ್ರಾಚೀನ ವಿದ್ಯಾಕೇಂದ್ರವು ಆಗಿದ್ದಂತೆ ಕಾಣುತ್ತದೆ.

ಆಯ್ತವರ್ಮನು ಬ್ರಾಹ್ಮಣರಿಗೆ, ಶೆಟ್ಟಿಗಳಿಗೆ, ಸ್ಥಾನಪತಿಗಳಿಗೆ, ದೇವಾಲಯಗಳಿಗೆ ದತ್ತಿ ದಾನ ಬಿಟ್ಟಿದ್ದಾನೆ. ಕೋಗಳಿಯ ಶಾಸನವು ಇವನು ಪಂಚಮಠಕ್ಕೆ, ಬಸದಿಗೆ ದಾನಬಿಟ್ಟುದನ್ನು ನಿರೂಪಿಸುತ್ತದೆ. ಅಲ್ಲದೆ ಇವನು ಕೋಗಳಿಯಲ್ಲಿ ಸ್ವತಂತ್ರವಾಗಿ ಎರಡು ದೇವಾಲಯಗಳನ್ನು ನಿರ್ಮಿಸಿ, ಕೋಗಳಿಯ ಪ್ರಜೆಗಳೊಂದಿಗೆ ಸೇರಿ ಮೂರನೆಯ ದೇಗುಲವನ್ನು ಮಾಡಿಸುತ್ತಾನೆ. ಈತನ ನಂತರ ಘಟ್ಟಿಯರಸನು ಕೋಗಳಿ ನಾಡಿನ ಕದಂಬ ಮನೆತನದಲ್ಲಿ ಪ್ರಸಿದ್ಧ ಮನ್ನೆಯನಾಗಿದ್ದಾನೆ. ಈತನ ನಂತರ ನಾಚಿದೇವರಸ, ಇಮ್ಮಡಿ ಘಟ್ಟಿಯರಸ, ಚಿಬಿದೇವರಸ, ಬೊಮ್ಮಿದೇವರಸ, ಸೋಯಿದೇವ ನೃಪಾಳ, ಕೋತೆಯ ನಾಗಾತ್ಯರಸ ಮುಂತಾದ ಸಾಮಂತ ಅರಸರು ಕೋಗಳಿಯನ್ನು ಆಳಿದುದ್ದಕ್ಕೆ ಅಂಬಳಿ, ಕೂಡ್ಲಿಗಿ, ಹಡಗಲಿ, ಹರಪನಹಳ್ಳಿ,

ನಂದಿಬೇವೂರು, ಅಲಬೂರು, ಮೋರಿಗೆರೆ, ಬೆಣ್ಣೆಹಳ್ಳಿಯಲ್ಲಿ ಸುಮಾರು ೯೯೧ ರಿಂದ ೧೧೫ಳ ರವರೆಗಿನ ಶಾಸನಗಳು ಹೇಳುತ್ತವೆ.

ಕೋಗಳಿಯು ಜೈನ ದೊರೆಗಳ ಆಡಳಿತ ಕೇಂದ್ರವೂ ಆಗಿತ್ತೆಂದು ಇಲ್ಲಿನ ತೀರ್ಥಂಕರ ಮೂರ್ತಿಗಳು ಸಾಕ್ಷಿ ನುಡಿಯುತ್ತವೆ. ಅಲ್ಲದೆ ಜೈನರಿಗೆ ಶ್ರವಣಬೆಳಗೊಳದಷ್ಟೇ ಪವಿತ್ರವಾದ ಸ್ಥಾನವು ಈ ಕೋಗಳಿಯಾಗಿತ್ತು. ಇಂತಹ ಉತ್ಕೃಷ್ಟ ಸ್ಥಾನದಲ್ಲಿದ್ದ ಕೋಗಳಿಯನ್ನು ಕ್ರಿ. ಶ. ೮೯೭ರ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಮೇವುಂಡಿ ಗ್ರಾಮದ ಶಾಸನವು ರಾಷ್ಟ್ರಕೂಟರ ದೊರೆ ಎರಡನೆ ಕೃಷ್ಣನ ಅಧಿಪತ್ಯದಲ್ಲಿ ಯಾದವರ ಮಹಾಸಾಮಂತನೊಬ್ಬ ಆಳುತ್ತಿದ್ದ ಎಂದು ಸಾರುತ್ತದೆ.

ಕೋಗಳಿಯಲ್ಲಿ ದೊರೆತಿರುವ ಕ್ರಿ. ಶ. ೧೦೫೫ರ ಶಾಸನದಲ್ಲಿ ಗಂಗರ ಅರಸ ದುರ್ವಿನಿತನ ಕಾಲಾವಧಿಯಿಂದಲೂ (೫೨೯–೫೭೯) ಕೋಗಳಿಯು ಖ್ಯಾತಿ ಹೊಂದಿತ್ತೆಂದು ತಿಳಿಸುತ್ತದೆ. ಈ ಶಾಸನದಲ್ಲಿ ಕೋಗಳಿಯಲ್ಲಿ ಜೈನ ಬಸದಿಯನ್ನು ಕಟ್ಟಿಸಿದ ಬಗ್ಗೆ ಅದನ್ನು ಇಂದ್ರಕೀರ್ತಿ ಎಂಬ ಮುನಿಯು ಜೀರ್ಣೋದ್ಧಾರ ಮಾಡಿದ ಬಗ್ಗೆ ಈ ಬಸದಿಗೆ ಇಟಗಿಯಲ್ಲಿ ೨ಳಮತ್ತರು ಭೂಮಿಯನ್ನು ದಾನ ಮಾಡಿದ ಬಗ್ಗೆ ತಿಳಿದು ಬರುತ್ತದೆ.

ಇಂದ್ರಕೀರ್ತಿ ಎಂಬ ಮುನಿಯು ಕುಂದಕುಂದಾನ್ವಯದ ದೇಶಿಗಣಕ್ಕೆ ಸೇರಿದ ಮುನಿಯಾಗಿದ್ದನು. ಈತನ ಮಾರ್ಗದರ್ಶನದಲ್ಲಿ ಕೋಗಳಿಯಲ್ಲಿ ವಿದ್ಯಾದಾನ ನಡೆಯುತ್ತಿತ್ತು. ಅಲ್ಲದೆ ಜೈನ ಕೇಂದ್ರವಾಗಿದ್ದ ಕೋಗಳಿಯನ್ನು ಕದಂಬರು ಆಳಿರುವುದು ಅಲ್ಲದೆ ರಾಷ್ಟ್ರಕೂಟರ ೩ನೆ ಕೃಷ್ಣನು ಕ್ರಿ. ಶ. ೯೭೨–೭೩ರಿಂದ ೯೭೬ರವರೆಗೆ ಕೋಗಳಿ ೫೦೦ಕ್ಕೆ ಒಡೆಯನಾಗಿದ್ದಂತೆ ತಿಳಿಯುತ್ತದೆ.

ಕ್ರಿ. ಶ. ೯೭೨–೭೩ರಲ್ಲಿ ಭೂತುಗ ದೇವರು ರಾಷ್ಟ್ರಕೂಟರ ೩ನೆ ಕೃಷ್ಣನ ಸೋದರನಾದ ಖೊಟ್ಟಿಗನ ಸಾಮಂತನಾಗಿ ಕೋಗಳಿಗೆ ರಾಜ್ಯಪಾಲನಾಗಿದ್ದನು. ಗಂಗರ ಸಾಮಂತರ ಅರಸ ಪಾಂಚಾಲದೇವ ಭೂತುಗನನ್ನು ಯುದ್ಧದಲ್ಲಿ ಸೋಲಿಸಿ ಕೋಗಳಿಯಿಂದ ಹೊರಬಿದ್ದನು. ಅಲ್ಲಿಂದ ಕೋಗಳಿಯು ಸಾಮಂತರ ಆಳ್ವಿಕೆಗೆ ಒಳಪಟ್ಟಿತ್ತು.

ಕ್ರಿ. ಶ. ೧೨೭೫ ಮತ್ತು ೧೨೭೬ರ ಕೋಗಳಿ ಶಾಸನಗಳು ಹೊಯ್ಸಳರ ದೊರೆ ರಾಮನಾಥನ ಕಾಲದಲ್ಲಿ ಕೋಗಳಿಯ ಚೆನ್ನಪಾರ್ಶ್ವದೇವ ಬಸದಿಗಾಗಿ ಹಲವಾರು ಜೈನ ಭಕ್ತರು ದತ್ತಿ ನೀಡಿದ್ದಾಗಿ ತಿಳಿಯುತ್ತದೆ. ಇದೇ ಕಾಲದಲ್ಲಿಯೇ ಕೋಗಳಿತೀರ್ಥ ಎಂಬ ಗುಣ ವಿಶೇಷದಿಂದ ಕರೆಸಿಕೊಂಡಿತ್ತು. ಹೊಯ್ಸಳರ ಕಾಲದಲ್ಲಿಯೂ ಜೈನ ಕೇಂದ್ರವಾಗಿ ಮುಂದುವರಿದ ಕೋಗಳಿ ಸುಮಾರು ೧೨೫ವರ್ಷಗಳ ಕಾಲ ವಿಜಯನಗರ ಅರಸರ ಆಳ್ವಿಕೆಗೆ ಒಳಗಾಗಿತ್ತು.

ಕ್ರಿ. ಶ. ೧೬೪೪ರ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಮೈದೂರು ಗ್ರಾಮದ ಶಾಸನವು ವಿಜಯನಗರವನ್ನು ವೆಂಕಟಾಪತಿ ದೇವರಾಜ ಆಳುತ್ತಿದ್ದಾಗ ಬಾಗಳಿಯ ಓಬಯ್ಯ ದೇವನಾಯಕ, ಕುಮಾರ ಮಹಾನಾಯಕಚಾರ್ಯ, ಬಸವಯ್ಯ ನಾಯಕನು ಕೋಗಳಿಯನ್ನು ಆಳುತ್ತಿದ್ದ ಎಂದು ತಿಳಿಸುತ್ತದೆ.

ಕನ್ನಡದ ಮೊದಲ ಗದ್ಯಕೃತಿ ವಡ್ಡರಾಧನೆಯ ಕರ್ತೃ ಶಿವಕೋಟ್ಯಾಚಾರ್ಯರ ಹುಟ್ಟೂರು ಕೂಡ ಕೋಗಳಿಯೇ ಆಗಿರುತ್ತದೆ. ಈ ಉಪಲಬ್ಧ ಕೃತಿ ವಡ್ಡಾರಾಧನೆಯಲ್ಲಿ ಕೋಗಳಿಯ ಪ್ರಸ್ತಾಪವು ದೊರೆಯುತ್ತದೆ. ಈ ಕೃತಿಯಲ್ಲಿ ಬರುವ ಕಾರ್ತಿಕ ಋಷಿ ಕತೆಯಲ್ಲಿ ಕೊನೆಗೆ ಕಾರ್ತಿಕ ಋಷಿಯ ಬಸದಿಯನ್ನು ಸಹೋದರಿ ವೀರಶ್ರೀಯು ಕೋಗಳಿಯಲ್ಲಿ ನಿರ್ಮಿಸುತ್ತಾಳೆ ಎಂದು ತಿಳಿಸುತ್ತದೆ. ೧೦ನೆ ಶತಮಾನದ ಶಾಸನದಲ್ಲಿ ಕೊಯಿಲ್ ಬಸದಿ ಎಂಬ ಪದ ಪ್ರಯೋಗವಿದೆ. ಕ್ರಿ ಶ. ೯೯೨ರ ಶಾಸನದಲ್ಲಿ ಹರಿ-ಹರ-ಬ್ರಹ್ಮ ಜಿನ, ಬುದ್ದಗಳೆಂಬ ಐದು ದೇವಾಲಯಗಳಿದ್ದವೆಂದು ಇವುಗಳಲ್ಲದೇ ಬೇರೆ ಬೇರೆ ದೇವಾಲಯಗಳಿರುವುದರ ಬಗ್ಗೆಯು ತಿಳಿಯುತ್ತದೆ. ಹರಪನಹಳ್ಳಿ ಮತ್ತು ಹಡಗಲಿ ತಾಲೂಕುಗಳ ಬಹುತೇಕ ಶಾಸನಗಳು ಕೋಗಳಿ ನಾಡಿನ ಬಗ್ಗೆ ತಿಳಿಸುತ್ತವೆ.

ಅಲ್ಲದೆ ವಿವಿಧ ಶಾಸನಗಳು ಕೋಗಳಿಯನ್ನು ಮನದುಂಬಿ ವರ್ಣಿಸುತ್ತವೆ. ಮೋರಿಗೆರೆ ಶಾಸನದಲ್ಲಿ ಸಮುದ್ರದಿಂದ ಆವೃತವಾಗಿರುವ ಭೂಮಿ ಎಂಬ ಸುಂದರ ಸ್ತ್ರೀಯ ಮುಖದಂತೆ ಕೋಗಳಿ ನಾಡು ಶೋಭಾಯಮಾನವಾಗಿ ಕಂಗೊಳಿಸುತ್ತಿತ್ತು ಎಂದು ಬರೆಯಲಾಗಿದೆ. ಅಂಬಳಿ ಶಾಸನದಲ್ಲಿ ಕುಂತಳಿ ದೇಶವೆನ್ನುವ ಮುಖಕ್ಕೆ ಮೂಗಿನಂತೆ ನೊಳಂಬವಾಡಿ ನಾಡು ಇದ್ದರೆ, ಆ ನೊಳಂಬವಾಡಿ ನಾಡಿಗೆ ಕಣ್ಣುಗಳಿದ್ದಂತೆ ಕೋಗಳಿನಾಡು ಮುಖ್ಯವಾಗಿದ್ದಿತೆಂದು ಈ ನಾಡಿನ ಗ್ರಾಮಗಳು ನಂದನ ವನಗಳಿಂದ ಕರೆ, ಬಾವಿ, ಹಳ್ಳ, ಕೊಳ್ಳ, ದೇವಾಲಯ ಬೆಳೆದು ನಿಂತ ಪೈರುಗಳಿಂದ ಕಂಗೊಳಿಸುತ್ತಿದ್ದಿತೆಂದು ವರ್ಣಿಸಲಾಗಿದೆ. ನೀಲಗುಂದ ಶಾಸನವು-

> ನಾಡುಗಳೊಳಗೆಲ್ಲ ಗಾಡಿವೆತ್ತ ಸಮದ
> ನಾಡುಗಳರಸ ನಲೆ ಚೆಲ್ವ! ಕೋಗಳಿ
> ನಾಡು ನೋಡಲ್ಕೆ ಸೊಗಯಿಕ್ಕುಂ ಎಂದು

ಹೇಳುತ್ತದೆ. ಈ ಎಲ್ಲಾ ವರ್ಣನೆಗಳು ಕೋಗಳಿ ನಾಡಿನ ಸಂಪತ್ತು, ಸಂಸ್ಕೃತಿ, ಪ್ರಾಕೃತಿಕ ಸೊಬಗನ್ನು ಸೂಚಿಸುತ್ತದೆ. ಕೋಗಳಿಯಲ್ಲಿನ ಶಾಸನವು ನಾಲ್ಕು ಯುಗದ ಪೊಳಲ್ ಎಂದು ವರ್ಣಿಸುತ್ತದೆ. ಅಂದರೆ ಮುಳುಗುಂದ, ಕೋಪಣ ಮತ್ತು ಶ್ರವಣಬೆಳಗೊಳಗಳಿಗೆ ಸಮಾನವಾದ ಪವಿತ್ರ ಕ್ಷೇತ್ರ ಕೋಗಳಿಯಾಗಿತ್ತಲ್ಲದೆ ಪಟ್ಟಿಂಗಳ ಚಕ್ರವರ್ತಿ ಎನಿಸಿತ್ತು. ಈ ರೀತಿ ಹೊಗಳಿಕೆಗೆ ಪಾತ್ರವಾದ ಈ ನಾಡು ಇಂದಿಗೂ ಕೂಡ ಹಲವಾರು ವಿಶೇಷತೆಗಳ ತವರಾಗಿ ಕಂಗೊಳಿಸುತ್ತದೆ.

ನೀಲಗುಂದ ಶಾಸನದ ಮೇಲಿನ ತ್ರಿಪದಿಯ ಹಿನ್ನೆಲೆಯಲ್ಲಿ ಕೋಗಳಿಯನ್ನು ಆಳಿದ ಅರಸನು ಅತೀ ಚೆಲುವನಾಗಿದ್ದು, ಬಹು ಸುಂದರವಾಗಿ ಕೋಗಳಿ ನಾಡನ್ನು ಆಳಿರಬೇಕು. ಹಾಗೆಯೇ ನಾಡುಗಳೊಳಗೆಲ್ಲ ಬಹಳ ಸುಂದರವಾಗಿ ಮತ್ತು ಸೊಗಸಾಗಿ ಕಂಗೊಳಿಸುತ್ತಿತ್ತು

ಎನ್ನುವುದಕ್ಕೆ ಪೂರಕವಾಗಿ ಇಂದಿಗೂ ಕೋಗಳಿ ಮತ್ತು ಸುತ್ತಮುತ್ತಲಿನ ಪ್ರದೇಶವು ಸದಾ ಹಸಿರಿನಿಂದ ಕೂಡಿದ ನಂದನ ವನಗಳಿಂದ ಕೂಡಿದ್ದು, ಇಲ್ಲಿ ಮಾವು, ಬೇವು, ಭತ್ತ, ತೆಂಗು, ಬಾಳೆ, ತಾಳೆ ಮುಂತಾದ ಬೆಳೆಗಳು ಬೆಳೆದು ನಿಂತ ಪೈರುಗಳು ವರ್ಷದ ಮುಕ್ಕಾಲು ಭಾಗ ಸಮಯ ತುಂಬಿಹರಿಯುವ ಹಳ್ಳಗಳು, ದೇವಾಲಯಗಳು ನೋಡುವುದಕ್ಕೆ ಸೊಗಸಾಗಿವೆ. ಒಟ್ಟಾರೆ ಈ ನಾಡಿನ ಸಂಪತ್ತು, ಸಂಸ್ಕೃತಿ, ಪ್ರಾಕೃತಿಕ ಸೌಂದರ್ಯ ನೋಡಲ್ಕೆ ಸೊಗಯಿಕ್ಕುಂ ಎನ್ನುವಂತಿದೆ.

ಬಳ್ಳಾರಿ ಜಿಲ್ಲೆಯು ಹಿಂದೆ ಎರಡು ಪ್ರಮುಖ ಆಡಳಿತ ವಿಭಾಗಗಳಲ್ಲಿ ಹಂಚಿಹೋಗಿತ್ತು. ಈಗಿನ ಹೊಸಪೇಟೆ, ಸಿರುಗುಪ್ಪ, ಬಳ್ಳಾರಿ ಮತ್ತು ಸಂಡೂರು ತಾಲೂಕಿನ ಕೆಲವು ಗ್ರಾಮಗಳು ಸಿಂಧವಾಡಿ ವಿಭಾಗಕ್ಕೆ ಸೇರಿದ್ದವು. ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹೂವಿನ ಹಡಗಲಿ, ಹರಪನಹಳ್ಳಿ ತಾಲೂಕಿನ ಕೆಲವು ಗ್ರಾಮಗಳು ಕೋಗಳಿ ೫೦೦ ವಿಭಾಗಕ್ಕೆ ಒಳಪಟ್ಟಿದ್ದವು. ಈ ವಿಭಾಗಗಳು ನೇರವಾಗಿ ಎರಡು ಭಿನ್ನ ರಾಜವಂಶೀಯರ ಆಡಳಿತಕ್ಕೆ ಒಳಪಟ್ಟಿದ್ದರೂ ಇವರಿಬ್ಬರ ಮೇಲಿನ ಮಹಾಮಂಡಳೇಶ್ವರ ಒಬ್ಬನೇ ಆಗಿದ್ದನು.

ಮೇಲಿನ ಎರಡು ಪ್ರಮುಖ ಆಡಳಿತ ವಿಭಾಗಗಳಲ್ಲಿ ಸಿಂದವಾಡಿ ಸಾಸಿರ ಮತ್ತು ಕೋಗಳಿ ೫೦೦, ಅಲ್ಲದೆ ಕದಂಬವಾಡಿ ಸಾಸಿರ ವಿಭಾಗಕ್ಕೆ ಹರಪನಹಳ್ಳಿ ತಾಲೂಕಿನ ಕೆಲವು ಗ್ರಾಮಗಳು ಒಳಗೊಂಡಿದ್ದವು. ಇವೆಲ್ಲವೂ ನೊಳಂಬವಾಡಿ ೩೨೦೦೦ ವಿಭಾಗದ ಉಪವಿಭಾಗಗಳಾಗಿದ್ದವು. ಕೋಗಳಿ ೫೦೦ ವಿಭಾಗವನ್ನು ಬೇರೆ ಬೇರೆ ರಾಜವಂಶೀಯರು ಆಳಿದರೆ, ಸಿಂಧವಾಡಿ ಸಾಸಿರವನ್ನು ನಂದ ಅರಸರು ಆಳಿದ್ದಾರೆ. ಕೋಗಳಿ ನಾಡು ಮತ್ತು ಸಿಂದವಾಡಿ ನಾಡುಗಳನ್ನು ಬೇರ್ಪಡಿಸುವ ಗಡಿಯೆಂದರೆ ಸಂಡೂರಿನಿಂದ ತುಂಗಭದ್ರ ನದಿಯವರೆಗೆ ಹಬ್ಬಿರುವ ಬೆಟ್ಟದ ಸಾಲು. ಈ ಬೆಟ್ಟದ ಪಶ್ಚಿಮಭಾಗ ತುಂಗಾಭದ್ರೆಯ ದಕ್ಷಿಣ ಭಾಗದಲ್ಲಿ ಕೋಗಳಿ ನಾಡು ಇದೆ.

**ಕೋಗಳಿ ೫೦೦**

ಕೋಗಳಿಯನ್ನು ರಾಜಧಾನಿಯನ್ನಾಗಿ ಹೊಂದಿ ಅದರ ಸುತ್ತ ಮುತ್ತಲ ೫೦೦ ಗ್ರಾಮಗಳನ್ನೊಳಗೊಂಡ ವಿಭಾಗವೇ ಕೋಗಳಿ ೫೦೦. ಈಗ ಕೋಗಳಿ ಹಗರಿಬೊಮ್ಮನಹಳ್ಳಿ ತಾಲೂಕಿನ ಚಿಕ್ಕ ಗ್ರಾಮ. ಆದರೆ ಪ್ರಾಚೀನ ಕಾಲದಲ್ಲಿ ಪ್ರಸಿದ್ಧ ನಗರವಾಗಿ ೫೦೦ ಗ್ರಾಮಗಳಿಗೆ ರಾಜಧಾನಿಯಾದ ಇದು ಜೈನರ ಕೇಂದ್ರವಾಗಿ ಜನಪ್ರಿಯವಾಗಿತ್ತು. ಕ್ರಿ. ಶ. ೫೮೯–೫೭೦ರವರೆಗೆ ಆಳಿದ ಗಂಗರ ದೊರೆ ದುರ್ವಿನೀತನು ಕೋಗಳಿಯಲ್ಲಿ ಬಸದಿಯನ್ನು ನಿರ್ಮಿಸಿದುದನ್ನು ೧೦೫೫ ಅಕ್ಟೋಬರ್ ೨೭ರ ಕೋಗಳಿ ಶಾಸನ ತಿಳಿಸುತ್ತದೆ. ಅಲ್ಲದೆ ಕನ್ನಡದ ಉಪಲಬ್ಧ ಪ್ರಥಮ ಗದ್ಯಕೃತಿ ವಡ್ಡಾರಾಧನೆಯಲ್ಲಿ ಕೋಗಳಿಯ ಪ್ರಸ್ತಾಪವಿದೆ. ಕಾರ್ತಿಕಋಷಿ ಕಥೆಯಲ್ಲಿ ಕಾರ್ತಿಕನ ಸಹೋದರಿ ವೀರಶ್ರೀಯನ್ನು ಕೋಗಳಿಯ ಅರಸ ಕ್ರೌಂಚನಿಗೆ ಕೊಟ್ಟು ವಿವಾಹ ಮಾಡಲಾಗುತ್ತದೆ. ಮುಂದೆ ಕಾರ್ತಿಕಋಷಿ ಸಂಚರಿಸುತ್ತಾ ಕೋಗಳಿಗೆ ಬರುತ್ತಾನೆ. ಈತನನ್ನು ಗುರುತಿಸಿದ

ವೀರಶ್ರೀಯು ಚರಿಗೆಗೆ ಅರಮನೆಗೆ ಬರಲು ವಿನಂತಿಸುತ್ತಾಳೆ. ಈ ದೃಶ್ಯ ನೋಡಿದ ಕ್ರೌಂಚ ತಪ್ಪು ಭಾವಿಸಿ 'ನಿಚ್ಚಲೀ ಸವಣನಲ್ಲಿಗೆ ಪರಿವಳೆಂದು ಕಿನಿಸಿ' ಶಕ್ತಾಯುಧದಿಂದ ಋಷಿಯನ್ನು ಹೊಡೆದು ವೀರಶ್ರೀಯ ಕೂದಲು ಹಿಡಿದು ಎಳೆದುಕೊಂಡು ಹೋಗುತ್ತಾನೆ. ಕಾರ್ತಿಕಋಷಿಯ ಅಜ್ಜಿ ವೀರಮತಿ ಮಹಾದೇವಿ ಬ್ರಹ್ಮಚರ್ಯ ವ್ರತದಿಂದ ವ್ಯಂತರ ದೇವತೆಯಾಗಿ ಹುಟ್ಟಿದುದರಿಂದ ಆಕೆ ಋಷಿಯಲ್ಲಿಗೆ ಬಂದು 'ಬಟಾರ' ಇವರೆಲ್ಲರನ್ನು ಕೊಂದು ಹೋಗು ಎನ್ನುತ್ತಾನೆ. ಆಗ ಆ ದೇವತೆ ನವಿಲ ರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು ಕೋಗಳಿಯ ಮೂಡಣ ದೆಸೆಯ ಪರ್ವತರ ಕೊಳದ ತಡಿಯೊಳ್ ಲತಾ ಮಂಟಪದೊಳಿರಿಸಿ ಹೋಗುತ್ತಾಳೆ. ಅಲ್ಲಿಯೇ ಕಾರ್ತಿಕಋಷಿ ಮರಣ ಹೊಂದುತ್ತಾನೆ. ಆ ಸ್ಥಳದಲ್ಲಿ ಸಹೋದರಿ ವೀರಶ್ರೀ ಬಸದಿ ನಿರ್ಮಿಸುತ್ತಾಳೆ. ಹೀಗೆ ಕೋಗಳಿ ರಾಜಧಾನಿಯಾಗಿ ಜೈನರ ಕೇಂದ್ರವಾಗಿ ಖ್ಯಾತವಾಗಿತ್ತು.

**ಆಕರಗಳು**


೧. ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ – ಅರ್ಜುನ. ಯ. ಗೊಳಸಂಗಿ.

೨. ಕಡಲಬಾಳು ಆಂಜನೇಯ ಸ್ವಾಮಿ ಸಾಂಸ್ಕೃತಿಕ ಅಧ್ಯಯನ – ಉಮಾಪತಿ ಬಿ.

೩. ಕನ್ನಡ ಕನ್ನಡ ನಿಘಂಟು – (ಕ.ಸಾ.ಪ) ೨ನೆ ಸಂಪುಟ, ಪ್ರ. ಬೆಂಗಳೂರು ವಿಶ್ವವಿದ್ಯಾಲಯ.

೪. ಗ್ರಾಮ ನಾಮಗಳ ಸಂಸ್ಕೃತಿ ಪರಿವೇಷ – ಡಾ. ವಿಶ್ವನಾಥ.

೫. ಹಲಸಂಗಿ ಗ್ರಾಮಾಧ್ಯಯನ – ಡಾ. ಶ್ರೀರಾಮ ಹಿಟ್ಟಣ್ಣನವರ.

೬. ಬಳ್ಳಾರಿ ಜಿಲ್ಲೆಯ ಶಾಸನಗಳು – ಜೆ. ಎಂ. ನಾಗಯ್ಯ.

# ಅಧ್ಯಾಯ – ೩

## ಆಂಜನೇಯನ ಪರಿಚಯ

ಪುರಾಣಗಳು ಹೇಳುವ ಹಾಗೆ ಹನುಮಂತ, ಅಶ್ವತ್ಥಾಮ, ಬಲಿ, ವ್ಯಾಸ, ವಿಭೀಷಣ, ಕೃಪ, ಪರಶುರಾಮ ಈ ಏಳು ಜನರು ಚಿರಂಜೀವಿಗಳು. ಇವರುಗಳಲ್ಲಿ ಹನುಮಂತ ಮಾತ್ರ ಜಗತ್ತು ಪ್ರಳಯವಾಗುವವರೆಗೂ ಇರುತ್ತಾನೆ. ಉಳಿದವರೆಲ್ಲರೂ ದೀರ್ಘಾಯುಷಿಗಳು ಮಾತ್ರ.

**೧. ಪದನಿಷ್ಪತ್ತಿ**

ಮಾರುತಿ, ವಾಯುಪುತ್ರ, ಹನುಮಂತ, ಪವನಸುತ, ಮುಖ್ಯ ಪ್ರಾಣದೇವ, ಆಂಜನೇಯ, ಹುಲಿಕುಂಟಿರಾಯ ಎಂದೆಲ್ಲಾ ಕರೆಯಿಸಿಕೊಳ್ಳುವ ಆಂಜನೇಯನನ್ನು ಹನು – ಎಂದರೆ ಉಬ್ಬಿದ ಗದ್ದ ಅಥವಾ ದವಡೆ, ಊದಿದ ಗದ್ದ ಅರ್ಥಾತ್ ಹನು ಉಳ್ಳವನನ್ನು ಹನುಮಂತ ಎಂದು ಕರೆದರೆ, ಊದಿಕೊಂಡ ಗದ್ದದವನು ಎಂದು ಅಣಕದ ಹೆಸರು ಬಂದಂತೆಯೂ ಕಾಣುತ್ತದೆ. ಮತ್ತೊಂದು ಅರ್ಥದಲ್ಲಿ ಹನು – ಎಂದರೆ ಅಜಾನುಬಾಹು, ಹನುಮಿಸು – ಎಂದರೆ ನೆಗೆ, ಹಾರು, ಲಂಘಿಸು, ಹಾರಾಡು ಎಂಬ ಅರ್ಥಗಳು ಬಂದಿರಬಹುದು. ಹಾಗೆಯೇ ಈತನಿಗೆ ಹಾರಾಡುವ ಅಸಾಧಾರಣ ಶಕ್ತಿ ಇರುವುದರಿಂದಲೇ ಹನುಮಂತ ಎಂಬ ಹೆಸರು ಬಂದಿರಲು ಸಾಧ್ಯವಾಗಿದೆ.

**೨. ಹಿನ್ನೆಲೆ**

ಹಲವಾರು ಪುಣ್ಯ ನಾಮಗಳಿಂದ ಕರೆಯಿಸಿಕೊಳ್ಳುವ ಆಂಜನೇಯನಿಗೆ ಪೌರಾಣಿಕ ಕತೆಯ ಹಿನ್ನೆಲೆಯಲ್ಲಿ ಅಂಜನಾದೇವಿಯ ಮಗನಾದ್ದರಿಂದ ಆಂಜನೇಯನೆಂಬ ಹೆಸರು ಬಂದಿದ್ದರೆ, ಇನ್ನೊಂದು ಪುರಾಣದಂತೆ ಈತನು ಗಾಳಿದೇವರಾದ ಮರುತನಿಗೆ ಹುಟ್ಟಿದ್ದರಿಂದ ಮಾರುತಿ ಎಂಬ ಹೆಸರು ಬಂದಿರಬಹುದು. ಅಲ್ಲದೆ ಈತನಲ್ಲಿ ಅಂತರಿಕ್ಷದೊಳಗೆ ಹಾರಾಡುವ ವಿಲಕ್ಷಣ ಶಕ್ತಿಯಿರುವುದರಿಂದ ಮಾರುತಿ ಎಂಬ ಹೆಸರು ಬಂದಿರುತ್ತದೆ. ಅಷ್ಟಾಂಗಯೋಗದ ಸಾಧನೆಯಲ್ಲಿಯೂ ಕೂಡ ಸಿದ್ಧ ಪುರುಷನಾದ್ದರಿಂದ ಮುಖ್ಯ ಪ್ರಾಣದೇವ ಎಂದು ಹೆಸರು ಬಂದಿದೆ.

ಪೌರಾಣಿಕ ಕತೆಯಂತೆ ಅಂಜನೆಯು ಪುಂಜಿಕ ಸ್ಥಲಿಯೆಂಬ ಅಪ್ಸರಿಯ ಶಾಪದಿಂದ ವಾನರ ಜನ್ಮವನ್ನು ಪಡೆದು, ಕೇಸರಿ ಎಂಬ ಕಪಿನಾಯಕನನ್ನು ಮದುವೆಯಾದಳು. ಅಂಜನಾದೇವಿ ಮತ್ತು ಕೇಸರಿ ಇಬ್ಬರೂ ಗಂಧರ್ವ ಲೋಕಕ್ಕೆ ಸೇರಿದವರು. ಸ್ವುರದ್ರೂಪಿಯಾದ ಅಂಜನೆಗೆ ಬಹಳ ದಿನಗಳ ಕಾಲ ಮಕ್ಕಳು ಆಗಲಿಲ್ಲವಾದ್ದರಿಂದ ವನದಲ್ಲಿ ತಿರುಗಾಡುತ್ತಿರುವಾಗ ಆಕೆಯ ಸೌಂದರ್ಯಕ್ಕೆ ವಾಯುದೇವನು ಮಾರು ಹೋಗಿ ಅವಳೊಂದಿಗೆ ಕೂಡಿದ್ದರಿಂದ

ಆಂಜನೇಯ ಅಥವಾ ಮಾರುತಿಯು ಹುಟ್ಟಿದನು ಎನ್ನುವುದು ರಾಮಾಯಣದ ಕತೆಯಾಗಿದೆ. ಕಾರಣ ಈತ ವಾಯುಪುತ್ರನೆನ್ನಬಹುದು.

ವೀರಶೈವ ಪುರಾಣಗಳು ಹನುಮಂತನು ಶಿವನಮಗನೆಂದು ಹೇಳುತ್ತವೆ. ಕಪಿಗಳ ಕೂಡುವಿಕೆಯನ್ನು ಕಂಡ ಶಿವನು ಕಪಿಗಳು ಕೂಡುವ ರೀತಿಯಲ್ಲಿ ಪಾರ್ವತಿಯೊಡನೆ ಕೂಡಿದಾಗ ಆಕೆ ಗರ್ಭಧರಿಸುತ್ತಾಳೆ. ಆ ಗರ್ಭದ ಹೊರೆಯನ್ನು ತಾಳಲಾರದೇ ವಾಯುವಿನ ಮುಖಾಂತರ ಕುರುಡಿಯಾದ ಅಂಜನಾದೇವಿಗೆ ತಲುಪಿಸಲು ಹೇಳಿದಾಗ ಅದನ್ನು ಆಕೆ ಸ್ವೀಕರಿಸುತ್ತಾಳೆ. ನಂತರ ಗರ್ಭ ತುಂಬಿ ಅಂಜನಾಳು ಮಗುವಿಗೆ ಜನ್ಮ ಕೊಡುತ್ತಾಳೆ. ಆ ಮಗುವೇ ಆಂಜನೇಯ ಎಂದು ತಿಳಿಯುತ್ತದೆ.

ಈ ಕಾರಣಕ್ಕಾಗಿಯೇ ಶಿವನ ಮಗನಾದ ಆಂಜನೇಯನನ್ನು ಅರ್ಥಾತ್ ಮಂಗನನ್ನು ಕೊಲ್ಲಬಾರದೆಂಬ ನಂಬಿಕೆಯು ರೂಢಿಯಲ್ಲಿದೆ. ಒಂದುವೇಳೆ ಕೊಂದರೆ ಅದನ್ನು ಆಂಜನೇಯನ ಗುಡಿಗೆ ತಂದು ವಿಧಿವತ್ತಾಗಿ ಅಂತ್ಯಕ್ರಿಯೆ ಮಾಡುವ ಪದ್ಧತಿಯೂ ಇಲ್ಲಿಯವರೆಗೂ ನಡೆದುಕೊಂಡು ಬಂದಿದೆ. ಅಲ್ಲದೆ ಶೈವ ಮತ್ತು ವೀರಶೈವರೂ ಕೂಡ ಈತನ ಭಕ್ತರಾಗಿರುವುದು ಕಂಡು ಬರುತ್ತದೆ.

ಅಂಜನಾದೇವಿಯು ಅಹಲ್ಯಾ ಗೌತಮರ ಮಗಳು, ಅಹಲ್ಯೆಯು ರಹಸ್ಯವಾಗಿ ಇಂದ್ರನಿಂದಲೂ, ಸೂರ್ಯನಿಂದಲೂ ಒಬ್ಬೊಬ್ಬ ಪುತ್ರನನ್ನು ಪಡೆದಳು. ಒಮ್ಮೆ ಗೌತಮ ಮಹರ್ಷಿ ಈ ಮಕ್ಕಳಿಬ್ಬರನ್ನು ಎತ್ತಿಕೊಂಡು ನಡೆಸುತ್ತಾ ಸಮುದ್ರ ತೀರದಲ್ಲಿ ಸಂಚರಿಸುತ್ತಿದ್ದಾಗ ಅಂಜನಾಳು ಈ ಇಬ್ಬರು ಗಂಡುಮಕ್ಕಳ ಹುಟ್ಟಿನ ರಹಸ್ಯವನ್ನು ಸಪ್ತರ್ಷಿಗಳಲ್ಲಿ ಒಬ್ಬನಾದ ಅತ್ರಿಗೆ ವಿವರಿಸಿದಳು. ಕೂಡಲೇ ಅತ್ರಿಯು "ಆ ಇಬ್ಬರು ಗಂಡು ಮಕ್ಕಳು ನನ್ನ ಮಕ್ಕಳಲ್ಲವಾದರೆ ಕಪಿ ಮುಖರಾಗಲಿ" ಎಂದು ಶಪಿಸಿದ. ಅವರಿಬ್ಬರು ಕಪಿಮುಖರಾದರು. ಇವರೇ ವಾಲಿ ಮತ್ತು ಸುಗ್ರೀವರು. ಬಳಿಕ ತನ್ನ ಗುಟ್ಟನ್ನು ರಟ್ಟು ಮಾಡಿದಳೆಂಬ ಕೋಪದಿಂದ ಅಹಲ್ಯೆಯೂ ತನ್ನ ಮಗಳು ಕುರುಡಿಯಾಗುವಂತೆ ಶಾಪಕೊಟ್ಟಳು. ಅಲ್ಲದೆ ಆಕೆಯ ಹೊಟ್ಟೆಯಲ್ಲಿ ಕಪಿ ಹುಟ್ಟುವಂತೆಯೂ ಶಪಿಸಿದಳು. ಆದಕಾರಣ ಹನುಮಂತನು ಆಕೆಯ ಮಗನಾಗಿ ಜನಿಸಿದ (ತೆಲುಗು-ವಚನ ವಿಚಿತ್ರ ರಾಮಾಯಣ).

ಹೀಗೆಲ್ಲಾ ಜನ್ಮವೆತ್ತಿದ ಸಾಧ್ಯತೆಗಳಿರುವ ಹನುಮಂತನು ಹನುಮಾನ್, ಮಾರುತಿ, ಆಂಜನೇಯ, ಮುಖ್ಯ ಪ್ರಾಣದೇವ ಮುಂತಾದ ಪುಣ್ಯ ನಾಮಗಳಿಂದ ಕರೆಯಿಸಿಕೊಂಡು ದೈವಿಗುಣಸಂಪನ್ನನಾಗಿದ್ದಾನೆ. ಈತನು ಅನುಪಮ ಶಕ್ತಿ, ಅಸಾಧಾರಣ ಸ್ವಾಮಿ ಭಕ್ತಿ ಹಾಗು ರಾಮ ನಾಮ ಜಪದ ತಾರಕನಾಮ ಮಹಿಮೆ, ಇವುಗಳ ಮಹಾ ಸಂಗಮದಂತಿದ್ದಾನೆ. ಎಲ್ಲಿ ರಾಮನೋ ಅಲ್ಲಿ ಹನುಮನು. ಹನುಮನ ಉಸಿರೇ ರಾಮ, ರಾಮನ ಪ್ರಾಣವೇ ಹನುಮ ಎಂಬುದು ಸಾರ್ಥಕವಾಗಿದೆ.

ಹನುಮಂತನು ಸಕಲ ಶಾಸ್ತ್ರ ಪಾರಂಗತ, ಮೃದುಭಾಷಿ ಸಂಪೂರ್ಣ ವ್ಯಕ್ತಿತ್ವ ಪಡೆದವನು. ಅತ್ಯುತ್ತಮ ಕರ್ಮಯೋಗಿ ಶ್ರೇಷ್ಠರಾಯಭಾರಿ, ಈತನ ಜನನ ಬಾಲ್ಯದ ಪ್ರಸಂಗಗಳು ಅತ್ಯದ್ಭುತವಾಗಿವೆ. ವಾಲ್ಮೀಕಿ ರಾಮಾಯಣದಲ್ಲಿ ಕಿಷ್ಕಿಂದಾ ಕಾಂಡದಿಂದ ಈತನ ಪ್ರಸ್ಥಾಪವಿದೆ. ಕಿಷ್ಕಿಂದೆಯನ್ನು ಆಳುತ್ತಿದ್ದ ವಾನರರಾಜ ವಾಲಿಯ ಆಳ್ವಿಕೆಯಲ್ಲಿ ವಾಲಿಯ ತಮ್ಮನಾದ ಸುಗ್ರೀವನಲ್ಲಿ ಹನುಮಂತನು ಪರಮ ಆಪ್ತನಾಗಿದ್ದನು. ವಾಲಿಸುಗ್ರೀವರಲ್ಲಿ ಪರಸ್ಪರ ಜಗಳವಾಗಿ ವಾಲಿಯು ಸುಗ್ರೀವನನ್ನು ರಾಜ್ಯದಿಂದ ಹೊರದೂಡಿ ಅವನ ಹೆಂಡತಿ ರುಮೆಯನ್ನು ತನ್ನ ಅಂತಃಪುರದಲ್ಲಿ ಇಟ್ಟಿರುವ ಸಮಯದಲ್ಲಿ ಕಿಷ್ಕಿಂದೆಗೆ ರಾಮಲಕ್ಷ್ಮಣರು ಆಗಮಿಸುತ್ತಾರೆ. ಇಂತಹ ಶುಭ ಆಗಮನದಿಂದ ಹನುಮಂತನ ಬದುಕು ಭವ್ಯವಾಯಿತು. ರಾಮನ ಪ್ರಥಮ ಸಂದರ್ಶನದಲ್ಲಿಯೇ ಸುಸಂಸ್ಕೃತ ವ್ಯಕ್ತಿತ್ವದ ಮಹಾನುಭಾವನಾಗಿ ಕಂಡಿದ್ದಾನೆ.

ವಾಯುಪುತ್ರನೆಂದು ಕರೆಯಿಸಿಕೊಳ್ಳುವ ಹನುಮಂತನ ಬಾಲ್ಯ ಜೀವನದ ಅಧ್ಭುತಗಳು ಪವಾಡ ಸದೃಶ ಸಂಗತಿಗಳಾಗಿವೆ. ಬಾಲಕನಾಗಿದ್ದಾಗ ಕುರುಡಿಯಾದ ತಾಯಿಯನ್ನು ಅಂಗಲಾಚಿ ಹಣ್ಣನ್ನು ಬೇಡುತ್ತಾನೆ. ಹಣ್ಣು ಕೆಂಪಗಿರುತ್ತದೆ. ಹುಡುಕಿ ತಿನ್ನು ಹೋಗು ಎಂದು ಅಂಜನೆಯು ಹೇಳಿದಾಗ ಸೂರ್ಯನನ್ನೆ ಹಣ್ಣು ಎಂದು ಭಾವಿಸಿ ತಿನ್ನಲು ಹೋಗಿ ಬಾಯಿ ಸುಟ್ಟು ಊದಿಕೊಂಡಂತಿದೆ ಎನ್ನುವುದು ಜನಪದರ ನಂಬಿಕೆ. ಆಗ ಬಾಲಕನಾಗಿದ್ದ ಹನುಮಂತನು ಮುಖವು ಸುಟ್ಟು ಯಾತನೆಯನ್ನು ಅನುಭವಿಸುವಾಗ ಸ್ವತಃ ಸೂರ್ಯನೆ ಸಂತೈಸಿದ್ದಾನಂತೆ (ಆನಂದ ರಾಮಾಯಣ). ರಾಮಾಯಣದ ಉತ್ತರ ಕಾಂಡದಲ್ಲಿ ಸರ್ಗ ೩೫–೩೬. ಸೂರ್ಯನೇ ಹನುಮಂತನಿಗೆ ವ್ಯಾಕರಣವನ್ನು ಕಲಿಸಿದ್ದಾನೆ ಎಂದಿದೆ (ವಾಲ್ಮೀಕಿ ರಾಮಾಯಣ) ಹನುಮಂತನು ವಾಲಿಗಿಂತಲೂ ಬಲಶಾಲಿಯಾಗಿದ್ದರೂ ಋಷಿಗಳ ಶಾಪದಿಂದ ತನ್ನ ಬಲದ ಅರಿವು ತನಗೆ ಇಲ್ಲದಂತಿದ್ದು, ಸುಗ್ರೀವನೊಂದಿಗೆ ಋಷ್ಯಮೂಕ ಪರ್ವತದ ಮತಂಗ ಮುನಿಯ ಆಶ್ರಯದಲ್ಲಿರುತ್ತಾನೆ. (ಬಳ್ಳಾರಿ ಜಿಲ್ಲೆಯ ಆನೆಗುಂದಿಯಿಂದ ಸುಮಾರು ಎಂಟು ಮೈಲಿಗಳ ದೂರದಲ್ಲಿ ತುಂಗಭದ್ರೆಯ ದಡದಲ್ಲಿರುವ ಒಂದು ಬೆಟ್ಟ) ರಾಮಲಕ್ಷ್ಮಣರು ಕಿಷ್ಕಿಂದೆಗೆ ಬಂದಾಗ ಅವರನ್ನು ಯಾರೆಂದು ತಿಳಿದುಕೊಂಡು ಬರಲು ಸುಗ್ರೀವನು ಹನುಮಂತನನ್ನು ಕಳುಹಿಸಿ ಕೊಡುತ್ತಾನೆ. ಆಗ ಹನುಮಂತನು ಆರ್ಯಪುತ್ರರೇ ಕಠೋರವಾದ ವ್ರತಾನುಷ್ಠಾನಗಳನ್ನು ಆಚರಿಸುವ ತಪಸ್ವಿಗಳಂತಿದ್ದು, ಬಿಲ್ಲು ಬಾಣಗಳನ್ನು ಧರಿಸಿರುವ ತಾವು ಯಾರು? ಇಲ್ಲಿಗೆ ಯಾಕೆ ಬಂದಿರಿ? ಇದು ಕಿಷ್ಕಿಂದೆಯ ನಾಡು, ಇಲ್ಲಿಯ ಅಧಿಪತಿಯು ವಾಲಿಯು. ವಾಲಿಯಿಂದ ಹೊರದೂಡಲ್ಪಟ್ಟ ಸುಗ್ರಿವನು ಇಲ್ಲಿ ವಾಸವಾಗಿದ್ದಾನೆ. ನಾನು ಸುಗ್ರೀವನ ಮಂತ್ರಿ ಹೆಸರು ಹನುಮಂತ ಎಂದು ಹೇಳಿದನು.

ಈ ರೀತಿ ಪರಿಚಯಿಸಿಕೊಂಡ ಹನುಮಂತನ ಮೃಧು–ಮಧುರ ವಚನಗಳಿಂದ, ಹಿತಮಿತ ನುಡಿಗಳಿಂದ ರಾಮಲಕ್ಷ್ಮಣರು ಸಂತೃಪ್ತರಾಗಿ ಹನುಮಂತನನ್ನು ತಮ್ಮ ಭಂಟನನ್ನಾಗಿ ಮಾಡಿಕೊಂಡಿದ್ದಾರೆ. ಅಯೋಧ್ಯೆಯಲ್ಲಿ ರಾಮ ಪಟ್ಟಾಭಿಷೇಕದ ನಂತರ ಎಲ್ಲರಿಗೂ

ಬಹುಮಾನಗಳನ್ನು ಕೊಟ್ಟರು. ಹನುಮಂತನಿಗೂ ಸಿಕ್ಕವು. ಅವು ರತ್ನ ಹಾರಗಳೇ? ಅಲ್ಲ "ಅವು ಭೌತ ವಸ್ತುಗಳಲ್ತೆ ಈತನಿಗೆ ದೊರೆತಿದ್ದು, ಮೋಕ್ಷಾಲಿಂಗನ". ಅದುವೇ ಈ ಸೇವಾಮೃತದ ಸೌಭಾಗ್ಯ. ಆತನ ಪಾಲಿಗೆ ಪಂಚಾಮೃತ. ಹೀಗೆ ಹನುಮಂತನು ಪರಿಪೂರ್ಣ ವ್ಯಕ್ತಿತ್ವದ ಸ್ವಾಮಿ ಭಕ್ತಿಯ ಸಾಕಾರವಾಗಿದ್ದಾನೆ. ಅದ್ವಿತೀಯ ಸಾಹಸದ ಸಾಹಸಿ, ರಾಮನಾಮ ಮಹಿಮೆಯ ಆದರ್ಶಮೇರು, ರಾಮಹೃದಯಿ, ಲೋಕಪೂಜ್ಯ ಯೋಗೀಶ್ವರ, ಬ್ರಹ್ಮಚಾರಿ, ಚಿರಂಜೀವಿಯಾದ ಹನುಮಂತನು ಭಾರತದ ಎಲ್ಲಾ ಜನರಿಂದಲೂ ಪೂಜೆಗೊಳ್ಳುತ್ತಿದ್ದು ನಾಡಿನ ಬಹಳಷ್ಟು ಸಮುದಾಯದ ಮನೆ ದೇವರಾಗಿದ್ದಾನೆ.

ರಥೋತ್ಸವ, ಮುಳ್ಳುಗದ್ದುಗೆ, ಮುಳ್ಳುಪವಾಡ, ಕೆಂಡ ತುಳಿಯುವುದು, ಹೊಂಡ ಹಾರುವುದು ಮುಂತಾದ ಆಚರಣೆಗಳ ಮುಖಾಂತರ ನಾಡಿನ ಮೂಲೆ-ಮೂಲೆಯಲ್ಲಿಯೂ ಈತನ ಕುರಿತ ಪವಾಡಗಳು ಇಂದಿಗೂ ನಡೆಯುತ್ತಲೇ ಬಂದಿದ್ದು, ಪ್ರತಿ ಯುಗಾದಿಯ ಮತ್ತು ಯುಗಾದಿಯ ನಂತರ ರಾಮನವಮಿಯ ಸಂದರ್ಭದಲ್ಲಿ ಹನುಮಪ್ಪನಿಗೆ ಸಂಬಂಧಿಸಿದಂತೆ ಹಬ್ಬ, ಜಾತ್ರೆ, ರಥೋತ್ಸವ ಪವಾಡಗಳಂತಹ ಆಚರಣೆಗಳು ಜರುಗುತ್ತವೆ. ರಾಮನವಮಿಯಲ್ಲಿ ಆಂಜನೇಯನ ಆಚರಣೆಗಳು ಎಂದರೆ! ರಾಮನಿಗಿಂತಲೂ ಹನುಮಂತನು ಬಹಳಷ್ಟು ಜನಪ್ರಿಯನಾಗಿದ್ದಾನೆ. ರಾಮನನ್ನು ಪೂಜಿಸುವುದಕ್ಕಿಂತ ಹೆಚ್ಚು ಜನರು ಆಂಜನೇಯನನ್ನು ಪೂಜಿಸುತ್ತಾರೆ. ಅಂತೆಯೇ ಕೋಗಳಿಯಲ್ಲಿಯೂ ಆಂಜನೇಯನಿಗೆ ಕುರಿತ ವಿಶೇಷ ಪೂಜೆಗಳು ನಡೆಯುತ್ತವೆ. ಊರಿನ ಬಹುಪಾಲು ಜನರ ಆರಾಧ್ಯ ದೈವ ಈತನೇ.

**೩. ದೇವಸ್ಥಾನ ಸ್ಥಾಪನೆ**

ಕೋಗಳಿ ಗ್ರಾಮದಲ್ಲಿ ೧೦-೧೨ ಸಣ್ಣ ಸಣ್ಣ ಗುಡಿಗಳಿದ್ದು, ಬಹುಶಃ ಇವುಗಳಲ್ಲಿ ಪ್ರಮುಖವಾದ ಊರಮ್ಮನ ಗುಡಿ, ಆಂಜನೇಯನ ಗುಡಿ, ಕಲ್ಲೇಶ್ವರನ ಗುಡಿ, ವೀರಭದ್ರೇಶ್ವರನ ಗುಡಿ, ಸೋಮನಾಥನ (ಪಾರ್ಶ್ವನಾಥನ) ಗುಡಿಗಳು ಗಂಗರ ಕಾಲದಲ್ಲಿ ನಿರ್ಮಾಣವಾಗಿರಬೇಕು. ಈ ಗುಡಿಗಳನ್ನು ಗಮನಿಸಿದಾಗ ೫-೬ನೇ ಶತಮಾನದಲ್ಲಿಯೇ ಸ್ಥಾಪನೆಯಾಗಿರಬಹುದೆಂದು ಅನಿಸುತ್ತದೆ. ಇದಕ್ಕೆ ಸಾಕ್ಷಿಯಾಗಿ ಕ್ರಿ. ಶ. ೧೦೫೫ರ ಶಾಸನದಲ್ಲಿ ಗಂಗರ ಅರಸನು ಆದ ದುರ್ವಿನೀತನ ಕಾಲಾವಧಿಯಿಂದಲೂ ಕೋಗಳಿ ಖ್ಯಾತಿ ಹೊಂದಿತ್ತೆಂದು, ಈ ಶಾಸನದಲ್ಲಿ (ಕೋಗಳಿಯಲ್ಲಿ ಶಾಸನ) ಜೈನ ಬಸದಿಯನ್ನು ಕಟ್ಟಿಸಿದ ಬಗ್ಗೆ ಅದನ್ನು ಇಂದ್ರ ಕೀರ್ತಿ ಎಂಬ ಮುನಿಯು ಜೀರ್ಣೋದ್ಧಾರ ಮಾಡಿದ ಬಗ್ಗೆ ಈತನು ಹಲವಾರು ದೇವಸ್ಥಾನಗಳನ್ನು ಕೋಗಳಿ ೫೦೦ರಲ್ಲಿ ಸ್ಥಾಪಿಸಿದ ಬಗ್ಗೆ ತಿಳಿಯುತ್ತದೆ. ಈ ನಾಲ್ಕಾರು ದೇವಾಲಯಗಳ ಅಕ್ಕಪಕ್ಕ ಹಲವಾರು ಶಾಸನ ಕಲ್ಲುಗಳನ್ನು ನಿಲ್ಲಿಸಿರುವುದನ್ನು ನೋಡಿದರೆ ೫-೬ನೇ ಶತಮಾನದಲ್ಲಿ ಸ್ಥಾಪಿಸಿರಬಹುದು. ಆಂಜನೇಯನ ದೇವಸ್ಥಾನದ ಹೊರ ಭಾಗವನ್ನು ೧೯೩೨ರಲ್ಲಿ ಸ್ಥಾಪಿಸಲಾಗಿದೆ. ದ್ವಾರಬಾಗಿಲಿಗೆ ಗೋಪುರವನ್ನು ಇತ್ತೀಚೆಗೆ ನಿರ್ಮಿಸಿದ್ದಾರೆ. ದೇವಸ್ಥಾನಕ್ಕೆ (ಪೌಳಿ)ಕಾಂಪೌಂಡು ಇದೆ. ದೇವಸ್ಥಾನದ ಆವರಣದಲ್ಲಿ ಎರಡು ಛತ್ರಗಳು (ಕೋಣೆಗಳು) ಇವೆ. ಈ ದೇವಾಲಯದ ಹೊರಗು ಮತ್ತು ಒಳಗೂ ಯಾವುದೇ ರೀತಿಯ ಸೂಕ್ಷ್ಮವಾದ ಕೆತ್ತನೆಯ ಕೆಲಸ ಕಂಡು

ಬರುವುದಿಲ್ಲ. ಗರ್ಭಗುಡಿಯು ಚಿಕ್ಕದಾಗಿದ್ದು, ಮುಂದಿನ ಭಾಗವನ್ನು ನವೀಕರಿಸಲಾಗಿದೆ. ಮುಖ್ಯದ್ವಾರದ ಎರಡು ಬದಿಯಲ್ಲು ಆನೆಗಳ ಮೂರ್ತಿಗಳು ಇವೆ. ಅವುಗಳ ಪಕ್ಕದಲ್ಲಿ ಶಾಸನ ಕಲ್ಲುಗಳು ಎರಡು ಬದಿಗಳಲ್ಲಿ ಕಾಣದೊರೆಯುತ್ತವೆ. ಬಾಗಿಲಿನ ಮುಂದೆಯೇ ಓಕುಳಿ ಹೊಂಡವಿದೆ. ಇದನ್ನು ಕೂಡ ಇತ್ತೀಚೆಗೆ ನೂರಾರು ವರ್ಷಗಳ ಹಿಂದೆ ನಿರ್ಮಿಸಿರಬೇಕು.

**೪. ಆಸ್ತಿ ಮತ್ತು ಆಡಳಿತ**

ಜೈನರ ಯುಗದಲ್ಲಿಯೇ ಕುಂದ-ಕುಂದಾನ್ವಯದ ದೇಶಿಗಣಕ್ಕೆ ಸೇರಿದ ಇಂದ್ರಕೀರ್ತಿ ಎಂಬ ಮುನಿಯು ದೇವಾಲಯಗಳನ್ನು ಕಟ್ಟಿಸಿ ಜೀರ್ಣೋದ್ಧಾರ ಮಾಡಿಸಿ ಹಲವಾರು ಜೈನ ಬಸದಿಗಳಿಗೆ ಮತ್ತರುಗಟ್ಟಲೆ ಭೂಮಿಯನ್ನು ದಾನವಾಗಿ ಬಿಟ್ಟಿದ್ದನು. ಆಂಜನೇಯನ ದೇವಸ್ಥಾನಕ್ಕೂ ಕೂಡ ೧೬ ಎಕರೆ ಭೂಮಿಯನ್ನು ಬಿಟ್ಟಿರಬೇಕು. ಸಾಮಾನ್ಯವಾಗಿ ಹಳ್ಳಿಗಳಲ್ಲಿ ದೇವರುಗಳಿಗೆ, ದೇವತೆಗಳಿಗೆ ಆಸ್ತಿಗಳು ಇದ್ದೇ ಇರುತ್ತವೆ. ಈ ಆಸ್ತಿಯ ಆದಾಯದಿಂದಲೇ ದೇವರ ಪೂಜೆಗೆ ತಗಲುವ ಖರ್ಚನ್ನು ಮಾಡುತ್ತಾ ಬಂದಿರಬೇಕು. ಕೋಗಳಿಯ ಆಂಜನೇಯ ಸ್ವಾಮಿಯ ಒಡೆತನದಲ್ಲಿ ಆತನ ಗುಡಿಯ ಎದುರುಗಡೆಯೇ ಎರಡು ಮನೆಗಳು ಇವೆ. ಸ್ವಾತಂತ್ರ ಸಿಗುವುದಕ್ಕೂ ಮುಂಚಿತವಾಗಿ ಆಂಜನೇಯನ ದೇವಸ್ಥಾನವು ಬ್ರಿಟಿಷ್ ಸರ್ಕಾರದ ಆಡಳಿತಕ್ಕೆ ಒಳಪಟ್ಟು ನಂತರದ ಅವದಿಯಲ್ಲಿ ಬ್ರಿಟಿಷರು ಕೂಡ ದೇವಸ್ಥಾನಕ್ಕಾಗಿ ಭೂಮಿಯನ್ನು ನೀಡುವ ಸಂಪ್ರದಾಯದಲ್ಲಿ ಆಂಜನೇಯನಿಗೆ ಹದಿನಾರು ಎಕರೆ ಭೂಮಿಯನ್ನು ಬಿಟ್ಟಿರಲೂಬಹುದು. ಈ ಭೂಮಿಯನ್ನು ಪದ್ಮಶಾಲಿ ಸಮುದಾಯದ ಮಲ್ಲಜ್ಜನು ನೋಡಿಕೊಂಡು ಬಂದು ನಂತರ ಈತನ ಮಗ ಸಿದ್ಧಪ್ಪ, ಸಂಬಂಧಿ ಹನುಮಂತನು ತಲಾ ಎಂಟೆಂಟು ಎಕರೆ ಮತ್ತು ಒಂದು ಮನೆಯನ್ನು ಉಪಯೋಗಿಸಿಕೊಂಡು ಬಂದಿದ್ದಾರೆ. ೧೯೭೦ರ ದಶಕದ ನಂತರ ಉಳುವವರೇ ಒಡೆಯ ಎನ್ನುವ ಕಾಯಿದೆಯ ಅಡಿಯಲ್ಲಿ ಈ ಭೂಮಿ ಮತ್ತು ಮನೆಗಳನ್ನು ಪೂಜಾರಿ ಸಿದ್ಧಪ್ಪ ಮತ್ತು ಹನುಮಂತಪ್ಪ ಇಬ್ಬರ ಹೆಸರಲ್ಲೂ ಮಾಡಿ ಕಂದಾಯ ಕರ ವಸೂಲಿ ಮಾಡುತ್ತಾ ಬಂದಿದ್ದು, ನಂತರ ಇತ್ತೀಚೆಗಷ್ಟೇ ೧೦-೧೨ವರ್ಷಗಳ ಹಿಂದೆ ಪೂಜಾರಿ ಹನುಮಂತಪ್ಪನು ಸಾಯುವ ಮೊದಲು ಪೂಜಾರಿ ಸಿದ್ಧಪ್ಪನಿಗೆ ಎಲ್ಲ ಆಸ್ತಿಯನ್ನು ಬರೆದುಕೊಟ್ಟಿದ್ದು ಒಟ್ಟು ಹದಿನಾರು ಎಕರೆ ಭೂಮಿಯನ್ನು ಮತ್ತು ಎರಡು ಮನೆಗಳನ್ನು ಸಿದ್ಧಪ್ಪನೇ ನಿರ್ವಹಿಸಿಕೊಂಡು ಹೋಗುತ್ತಾನೆ. ಈ ಭೂಮಿಯಲ್ಲಿ ಬಂದಂತಹ ಆದಾಯದಿಂದಲೇ ದಿನ ನಿತ್ಯ ಆಂಜನೇಯನ ಪೂಜೆ ಅಭಿಷೇಕ ಮುಂತಾದವುಗಳನ್ನು ಮಾಡಲು ಹಣ್ಣು-ಹೂ, ಕಾಯಿಗಳನ್ನು ತೆಗೆದುಕೊಂಡು ಪೂಜಿಸುತ್ತಾರೆ.

# ಅಧ್ಯಾಯ – ೪

## ಆಂಜನೇಯನ ಆಚರಣೆ, ನಂಬಿಕೆ ಹಾಗೂ ಹರಕೆಗಳು

೧. **ಆಚರಣೆ:**– ಅನುಸರಿಸುವುದು, ಆಚರಿಸುವುದು, ಸಂಪ್ರದಾಯದಂತೆ, ನಡೆಯುವುದು ಎಂದು ಅರ್ಥೈಸಿಕೊಂಡರೆ,

ಮನುಷ್ಯನು ಅಗೋಚರವಾದ ದೈವಶಕ್ತಿಗಳ ಪ್ರೀತ್ಯಾರ್ಥವಾಗಿ ನಡೆಸುವ ಮತಾಚಾರಗಳು ಮತ್ತು ಕರ್ಮವಿಧಿಗಳನ್ನು ಆಚರಣೆಗಳೆಂದು ಕರೆಯುತ್ತಾರೆ. ಈ ಆಚರಣೆಗಳನ್ನು ಪರಂಪರಾಗತವಾಗಿ ಮುಂದುವರೆಸಿಕೊಂಡು ಬಂದಿರುವುದರಿಂದ ಇವುಗಳ ಹಿನ್ನೆಲೆಯಲ್ಲಿ ಬಲವಾದ ನಂಬಿಕೆಗಳು ಇರುತ್ತವೆ. ಆಚರಣೆಗಳು ಧಾರ್ಮಿಕ ವಲಯದಲ್ಲಿರುವುದೇ ಹೆಚ್ಚು. ಈ ರೀತಿಯ ಆಚರಣೆಗಳನ್ನು ಅನುಷ್ಠಾನಕ್ಕೆ ತಂದರೆ ತಾನು ನಂಬಿದ ಅಗೋಚರ ಮತ್ತು ಪವಿತ್ರ ವಸ್ತುಗಳಿಗೆ ತನ್ನ ಮೇಲೆ ಪ್ರೀತಿ ಉಂಟಾಗುತ್ತದೆಂದು ಮನುಷ್ಯನ ನಂಬಿಕೆಯಾಗಿದೆ. ನಂಬಿಕೆ ಮತ್ತು ಆಚರಣೆಗಳು ಒಟ್ಟೊಟ್ಟಿಗೆ ಇದ್ದರೂ ಕೂಡ ಕೆಲವು ವೇಳೆ ಗೊತ್ತಿಲ್ಲದಂತೆಯೇ ಅವೆರಡಕ್ಕೂ ಸಂಬಂಧವೇ ಇಲ್ಲವೇನೋ ಎನ್ನುವ ಸಂದರ್ಭ ಬರಬಹುದು. ಪಾವಿತ್ರ್ಯತೆಯು ಅಗೋಚರ ಶಕ್ತಿಗಳ ಬಗೆಗಿರುವ ಭಯದ ಕಾರಣಕ್ಕಾಗಿ ಆಚರಣೆಗಳನ್ನು ಭಕ್ತಿ ಶ್ರದ್ಧೆಗಳಿಂದ ನಡೆಸಲಾಗುವುದು.

ಒಬ್ಬ ವ್ಯಕ್ತಿ ಇಷ್ಟಪಟ್ಟು ಒಂದು ಆಚರಣೆಯನ್ನು ಸೃಷ್ಟಿ ಮಾಡಲು ಸಾಧ್ಯವಿಲ್ಲ. ಒಂದು ಸಮುದಾಯದ ಜೀವನ ವಿಧಾನದ ಬೇಡಿಕೆಯ ಅಂಗವಾಗಿ ಆಚರಣೆ ರೂಪು ಪಡೆಯುತ್ತದೆ. ಇಂತಹ ಆಚರಣೆಯು ತಲೆ–ತಲಾಂತರದಿಂದ ಸಮುದಾಯದ ಅಂಗೀಕಾರವನ್ನು ಪಡೆದು ಬಳಕೆಯಲ್ಲಿರುವ ಮಾಟ ಮತ್ತು ಧಾರ್ಮಿಕ ವಿಧಿ ವಿಧಾನಗಳೇ ಜಾನಪದ ಆಚರಣೆಗಳಾಗಿರುತ್ತವೆ.

ಪ್ರಕೃತಿಯಲ್ಲಿ ಮತ್ತು ಮಾನವನ ದೇಹದಲ್ಲಿ ಉಂಟಾಗುವ ಬದಲಾವಣೆಯನ್ನು ಆಚರಣೆಗಳ ಮೂಲಕ ಗುರುತಿಸಲಾಗುತ್ತದೆ. ಆಚರಣೆಗಳನ್ನು ಮಾನವನ ಬದುಕಿಗೆ ಮತ್ತು ಆತನ ಭಾವ ಪ್ರಪಂಚಕ್ಕೆ ಸಂಬಂಧಿಸಿದ ಆಚರಣೆಗಳು, ಆರ್ಥಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಆಚರಣೆಗಳು, ನೈಸರ್ಗಿಕ ಕ್ರಿಯೆಗಳಿಗೆ ಸಂಬಂಧಿಸಿದ ಆಚರಣೆಗಳು, ಸಾಮಾಜಿಕ ರಚನೆಗಳಿಗೆ ಸಂಬಂಧಿಸಿದ ಆಚರಣೆಗಳು ಎಂದು ಸ್ಥೂಲವಾಗಿ ವಿಭಾಗಿಸಬಹುದು.

ದೈವಕ್ಕೆ ಸಂಬಂಧಿಸಿದ ಆಚರಣೆಗಳನ್ನು ಜಾನಪದರು ದಿನಕ್ಕೊಂದು ಸಾರಿ, ವಾರಕ್ಕೊಂದು ಸಾರಿ, ತಿಂಗಳಿಗೊಂದು ಸಾರಿ, ವರ್ಷಕ್ಕೊಂದು ಸಾರಿ, ಒಂದು ದೇವತೆಯ ಆರಾಧನೆಯ ಹಿನ್ನೆಲೆಯಲ್ಲಿ ಆಚರಿಸುತ್ತಾರೆ. ಹೀಗೆ ಸಕಲ ಪೂರ್ವ ಸಿದ್ಧತೆಗಳೊಂದಿಗೆ ಆಗುವ ಹಬ್ಬ–ಹರಿದಿನಗಳು, ತಿಥಿ–ಮತಿಗಳು, ಅನೇಕ ಆಚರಣೆಗಳ ಮೊತ್ತವಾಗುತ್ತದೆ.

ಹೀಗೆ ಒಂದು ದಿನಕ್ಕೊಮ್ಮೆ ಆಚರಿಸುವ ಆಚರಣೆಗಳನ್ನು ದೈನಿಕಾವರ್ತನದ ಆಚರಣೆಗಳೆಂದು, ವರ್ಷಕ್ಕೊಮ್ಮೆ ಆಚರಿಸುವ ಆಚರಣೆಗಳನ್ನು ವಾರ್ಷಿಕಾವರ್ತನದ ಆಚರಣೆಗಳೆಂದು , ಮನುಷ್ಯ ಹುಟ್ಟಿದಾಗಿನಿಂದ ಸಾಯುವವರೆಗೂ ಆಚರಿಸುವ ಆಚರಣೆಗಳನ್ನು ಜೀವನಾವರ್ತನದ ಆಚರಣೆಗಳೆಂದು ಕರೆಯಲಾಗುತ್ತದೆ.

ಈ ರೀತಿಯ ಎಲ್ಲಾ ಆಚರಣೆಗಳನ್ನು ಕೋಗಳಿ ಗ್ರಾಮದಲ್ಲಿ ಊರಿನ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರು, ಕುರುಬರು, ಬಾರಿಕರು, ಚಲವಾದಿಗಳು, ಮಡಿವಾಳರು, ವೀರಶೈವರು, ಬೆಸ್ತರರು ಮುಂತಾದವರು ಕೂಡಿಯೇ ಆಚರಿಸುತ್ತಾರೆ. ಒಟ್ಟಾರೆ ಆಂಜನೇಯನಿಗೆ ಸಂಬಂಧಿಸಿದ ಆಚರಣೆಗಳನ್ನು ವಾರ್ಷಿಕಾವರ್ತನದ ಆಚರಣೆಗಳು ಮತ್ತು ಜೀವನಾವರ್ತನದ ಆಚರಣೆಗಳು ಎಂದು ವಿಂಗಡಿಸಬಹುದು.

**೨. ವಾರ್ಷಿಕಾವರ್ತನದ ಆಚರಣೆಗಳು**

**ದಿನಂಪ್ರತಿ**

ದಿನಾಲು ಸೂರ್ಯೋದಯಕ್ಕೆ ಮುಂಚೆಯೇ ಆಂಜನೇಯನ ಅರ್ಚಕನಾದ ಪೂಜಾರ್ ಸಿದ್ಧಪ್ಪನು ಒಮ್ಮೊಮ್ಮೆ ಇವರ ಮಕ್ಕಳಾದ ಮಾರುತಿ, ಮಲ್ಲಜ್ಜನು ಯಾರಾದರೂ ಸರಿ ಒಬ್ಬರು ಸ್ನಾನಾದಿಗಳನ್ನು ಪೂರೈಸಿ ಮಡಿಯಿಂದ ಬಾವಿಗೆ ಹೋಗಿ ತಾಮ್ರದ ಕೊಡದಲ್ಲಿ (ಪೂಜೆಗೆಂದೆ ನಿಯಮಿಸಿದ ಸಣ್ಣ ಕೊಡ) ಹಗ್ಗದಿಂದ ನೀರನ್ನು ಸೇದಿಕೊಂಡು ಬಂದು ಆಂಜನೇಯನಿಗೆ ಸ್ನಾನ ಮಾಡಿಸಿ, ಬಿಲ್ವ ಪತ್ರಿಯನ್ನು ಸ್ವಾಮಿಗೆ ಏರಿಸಿ ಕುಂಕುಮ ಲೇಪಿಸಿ ಪೂಜೆಯನ್ನು ಮಾಡುತ್ತಾರೆ. ಊರಿನ ಹಲವಾರು ಜನ ಭಕ್ತರು, ಹಿರಿ–ಕಿರಿಯರು ದಿನಾಲು ಬೆಳಗ್ಗೆ ಎದ್ದು ಮಡಿಯಿಂದ ಆಂಜನೇಯನ ದೇವಸ್ಥಾನಕ್ಕೆ ಬಂದು ಕೈ ಮುಗಿದು ಬೇಡಿಕೊಂಡು ಹೋಗುವುದು ಸಂಪ್ರದಾಯ. ಅಲ್ಲದೆ ಕೆಲವರು ಎಳ್ಳುಎಣ್ಣೆ, ಔಡಲಎಣ್ಣೆ, ಹರಳೆಣ್ಣೆ ಮುಂತಾದ ಎಣ್ಣೆಯ ದೀಪವನ್ನು ಆಂಜನೇಯನ ದೇವಸ್ಥಾನದ ಮುಖ್ಯ ದ್ವಾರದ ಬಾಗಿಲಿನ ಎರಡು ಬದಿಯಲ್ಲಿ ಹಚ್ಚಿ, ಆರತಿ ಬೆಳಗಿ ತಮ್ಮ ತಮ್ಮ ಭಕ್ತಿಯನ್ನು ಅರ್ಪಿಸುತ್ತಾರೆ.

**ವಾರದ ಶ್ರೇಷ್ಠ ದಿನ ಶನಿವಾರ**

ವಾರದ ದಿನಗಳಲ್ಲಿ ಆಂಜನೇಯನಿಗೆ ಸಂಬಂಧಿಸಿದಂತೆ ಶ್ರೇಷ್ಠದಿನವೆಂದು ಶನಿವಾರವನ್ನು ಪರಿಗಣಿಸುತ್ತಿದ್ದು, ಈ ದಿನ ಅರ್ಚಕರು ಬೆಳಗ್ಗೆ ಮತ್ತು ಸಾಯಂಕಾಲ ವಿಶೇಷವಾಗಿ ಹೂ–ಪತ್ರಿ ಇಡುತ್ತ ಎರಡು ಬಾರಿ ಮಡಿ ಮೈಲಿಗೆಯಿಂದ ಪೂಜಿಸುತ್ತಾರೆ. ಅಂದು ಊರಿನ ಬಹಳಷ್ಟು ಜನರು ಉಪವಾಸ ವ್ರತವನ್ನು ಮಾಡುತ್ತಾರೆ. ಊರಿನ ಎಲ್ಲಾ ಜನಾಂಗದವರು ಸ್ನಾನ ಮಾಡಿ ಮಡಿಯಿಂದ ಆಂಜನೇಯನ ದೇವಸ್ಥಾನಕ್ಕೆ ಬಂದು ತೆಂಗಿನಕಾಯಿ ಅರ್ಪಣೆಯನ್ನು ಇನ್ನು ಕೆಲವರು ದೇವಸ್ಥಾನದ ಸುತ್ತಲು ಸಕ್ಕರೆಯನ್ನು ಸುರಿಯುವುದು ರೂಢಿ. ಸ್ವಾಮಿಗೆ ಸಕ್ಕರೆಯನ್ನು ಅರ್ಪಿಸುವುದರ ಮುಖಾಂತರ ಇರುವೆಗಳಿಗೆ ಆಹಾರವನ್ನು ಉಣಬಡಿಸುತ್ತಾರೆ.

ಗ್ರಾಮಸ್ಥರು ತಾವು ಬೇಡಿಕೊಂಡಂತೆ ೨೧ ದಿನ ಬೆಳಿಗ್ಗೆ ೪೧ ದಿನ ಬೆಳಿಗ್ಗೆ ಯಾರೊಂದಿಗೂ ಮಾತಾಡದಂತೆ ದೇವಸ್ಥಾನಕ್ಕೆ ಬಂದು ಬೇಡಿಕೊಂಡರೆ, ಕೋಗಳಿಯ ಕರಿಹನುಮ ಬೇಡಿಕೆಯನ್ನು ಈಡೇರಿಸುತ್ತೇನೆ ಎನ್ನುವ ನಂಬಿಕೆ ಅಲ್ಲಿಯ ಜನರದು.

**ಅಮವಾಸ್ಯೆ**

ಪ್ರತಿ ಅಮವಾಸ್ಯೆಗೊಮ್ಮೆ ಆಂಜನೇಯನಿಗೆ ಅರ್ಚಕರು ವಿಶೇಷ ಪೂಜೆಯನ್ನು ಸಲ್ಲಿಸುತ್ತಾರೆ. ಬೆಳಗಿನ ಜಾವ ಎದ್ದು ಮಡಿಯಿಂದ ಬಾವಿಗೆ ಹೋಗಿ ನೀರನ್ನು ತಂದು ಸ್ವಾಮಿಗೆ ಸ್ನಾನಮಾಡಿಸಿ, ವಿವಿಧ ರೀತಿಯ ಅಭಿಷೇಕವನ್ನು ಮಾಡುತ್ತಾರೆ. ಅಂದು ಯಾರಾದರೂ ಭಕ್ತರು ಅಥವಾ ಆ ಊರಿನ ಎಳೆಬಳ್ಳಿ ತೋಟವಿರುವ ಕೃಷಿಕರು ತಮ್ಮ ಹರಕೆಯಂತೆ ಪ್ರತಿ ಅವಮಾಸ್ಯೆಯ ಒಂದೆರಡು ದಿನ ಮುನ್ನವೆ ಆಂಜನೇಯನಿಗೆ ಎಲೆ ಪೂಜೆಯನ್ನು ಮಾಡಿಸಲು ಬೇಕಾದ ಎಲೆ ಮತ್ತು ಇತರೆ ಪೂಜಾ ಸಾಮಗ್ರಿಗಳನ್ನು ಅರ್ಚಕರಿಗೆ ಒಪ್ಪಿಸುತ್ತಾರೆ. ಅಲ್ಲದೆ ಕುಂಕುಮ ಪೂಜೆಯನ್ನು ಮಾಡಿಸಬೇಕು ಎಂದು ಯಾರಾದರೂ ಅಂದು ಕೊಂಡಿದ್ದರೆ, ಕುಂಕುಮವನ್ನು ಇತರೆ ಪೂಜಾ ವಸ್ತುಗಳನ್ನು ಒಂದೆರಡು ದಿನ ಮುಂಚಿತವಾಗಿ ಅರ್ಚಕರಿಗೆ ಕೊಟ್ಟಿರುತ್ತಾರೆ. ಕಾರಣ ಅಮವಾಸ್ಯೆಯ ದಿನ ಸೂರ್ಯೋದಯಕ್ಕೆ ಮುನ್ನ ಆಂಜನೇಯ ಸ್ವಾಮಿಯನ್ನು ವಿವಿಧ ರೀತಿಯ ಬೆಳ್ಳಿ, ಬಂಗಾರದ ಆಭರಣಗಳಿಂದ ಕಣ್ಣು, ಉಬ್ಬು, ಮೀಸೆ, ಪಾದ, ಕಿವಿ, ಗದೆ, ಸೊಂಟ ಪಟ್ಟಿ ಮುಂತಾದವುಗಳನ್ನು ತೊಡಿಸಿ ಎಲೆಯಿಂದ ಅಲಂಕರಿಸಿ ಪೂಜೆಯನ್ನು ಮಾಡುತ್ತಾರೆ. ಎಲೆ ಪೂಜೆ ಮಾಡಿದ್ದು ಎಲ್ಲರಿಗೂ ಗೊತ್ತಾದಂತೆ ಎಲ್ಲ ಭಕ್ತರು ದೇವಸ್ಥಾನಕ್ಕೆ ಬಂದು ದರುಶನ ಪಡೆದುಕೊಂಡು ಹೋಗುತ್ತಾರೆ. ನಂತರದ ದಿನ ಎಲೆಪೂಜೆಯನ್ನು ಅಥವಾ ಕುಂಕುಮ ಪೂಜೆಯನ್ನು ಇಳಿಸಿದ ನಂತರ ಎಲ್ಲರೂ ಎಲೆಯನ್ನು ಕುಂಕುಮವನ್ನು ಪಡೆದುಕೊಂಡು ಹೋಗುತ್ತಾರೆ.

ಒಂದು ವೇಳೆ ಅಮವಾಸ್ಯೆಯ ದಿನ ಯಾವ ಭಕ್ತರು ಎಲೆಪೂಜೆ ಅಥವಾ ಕುಂಕುಮ ಪೂಜೆಯನ್ನು ಮಾಡಿಸದಿದ್ದಾಗ, ದೈವದವರು ಆಂಜನೇಯನ ಕಮಿಟಿಯ ಹಣದಿಂದಲೇ ಇಂತಹ ಪೂಜೆಗಳನ್ನು ಮಾಡಿಸುತ್ತಾರೆ. ಒಟ್ಟಾರೆ ಪ್ರತಿ ಅಮವಾಸ್ಯೆಗೂ ಕುಂಕುಮ ಪೂಜೆ ಇಲ್ಲವೇ ಎಲೆ ಪೂಜೆ ಇದ್ದೇ ಇರುತ್ತದೆ. ಅಂದು ಕ್ಷೀರಾಭಿಷೇಕ, ಪಂಚಾಮೃತಾಭಿಷೇಕ, ಕುಂಕುಮಾರ್ಚನೆ ಮುಂತಾದ ಪೂಜೆಗಳನ್ನು ಅರ್ಚಕರು ಮಾಡುತ್ತಾರೆ.

**ಹುಣ್ಣಿಮೆಯ ದಿನ**

ಹುಣ್ಣಿಮೆಯ ದಿನವೂ ಕೂಡ ಅಮವಾಸ್ಯೆಯ ದಿನ ನಡೆಯುವ ಎಲ್ಲಾ ಪೂಜಾದಿಗಳನ್ನು ಅರ್ಚಕರು ಮಡಿಯಿಂದ ಮಾಡುತ್ತಾರೆ. ಎಲ್ಲಾ ರೀತಿಯ ಪೂಜೆಗಳನ್ನು ಊರಿನ ಯಾವ ಜನಾಂಗದವರೇ ಆಗಲಿ ಮಾಡಿಸಬಹುದು. ಅಲ್ಲಿ ಯಾವುದೇ ತಾರತಮ್ಯವಿಲ್ಲ. ಹಾಗಾಗಿ ಪ್ರತಿ ಹುಣ್ಣಿಮೆಯ ದಿನವಿಶೇಷ ಪೂಜೆಗಳನ್ನು ಮಾಡುತ್ತಾರೆ. ಆ ದಿನವೂ ಕೂಡ ಊರಿನ ಕೆಲಜನ

ಉಪವಾಸ ವ್ರತವನ್ನು ಮಾಡುತ್ತಾರೆ. ಹುಣ್ಣಿಮೆಯ ದಿನ ವಿಶೇಷವಾಗಿ ಕುಂಕುಮ ಪೂಜೆಯನ್ನೇ ಮಾಡಿಸುವುದು ರೂಢಿ.

**ಹಬ್ಬ ಹರಿದಿನ**

ಮಾನವನ ಜೀವನವನ್ನು ರೂಪಿಸುವಲ್ಲಿ ಸಂಸ್ಕೃತಿಯನ್ನು ಪೋಷಿಸುವಲ್ಲಿ, ನಾಗರೀಕತೆಯನ್ನು ಬೆಳೆಸುವಲ್ಲಿ ಸಂಪ್ರದಾಯಾಚರಣೆಗಳಿಗೆ ವಿಶೇಷ ಮಹತ್ವವಿದೆ. ಅವು ಅವನ ಬಾಳಿನ ಅವಿಭಾಜ್ಯ ಸಂಗತಿಗಳಾಗಿವೆ. ಸಮಾಜವನ್ನು ಒಂದುಗೂಡಿಸುವ ಮತ್ತು ಮುಂದಕ್ಕೊಯ್ಯುವ ಶಕ್ತಿಪುಂಜಗಳಾಗಿವೆ. ಅವನ ನಡವಳಿಕೆಗಳು ಹಾಗೂ ವ್ಯವಹಾರಗಳು ಸಂಪ್ರದಾಯ ಬದ್ಧವಾಗಿಯೇ ಜರುಗುತ್ತವೆ. ಈ ಸಂಪ್ರದಾಯ ಮತ್ತು ನಂಬಿಕೆಗಳ ಕ್ರಿಯಾ ರೂಪಗಳೇ ಹಬ್ಬಗಳು. ಅವುಗಳ ಬೇರು ಮಾಟಗಳಲ್ಲಿ ಅಡಗಿದೆ. ನಿಸರ್ಗಾರಾಧನೆಯಲ್ಲಿ ಪಸರಿಸಿದೆ. ಅವು ಕೃತಿ ಸಂಸ್ಕೃತಿಗಳಲ್ಲಿ ಸ್ಪಷ್ಟ ರೂಪವನ್ನು ಪಡೆದು ಕಾಲಾನಂತರದಲ್ಲಿ ವಿಕಾಸಗೊಳ್ಳುತ್ತಾ ಜಟಿಲವಾದದ್ದುಂಟು. ಪ್ರತಿಯೊಂದು ಯುಗದ ಜನರು ಆಯಾ ಕಾಲದ ಅಭಿರುಚಿ ಮನೋಧರ್ಮಗಳಿಗನುಸಾರವಾಗಿ ತಮ್ಮ ತಮ್ಮ ಕಲ್ಪನೆಗಳಿಗನುಸಾರವಾಗಿ ಅವುಗಳ ರೂಪ ಸ್ವರೂಪಗಳಲ್ಲಿ ಮಾರ್ಪಾಡುಗಳನ್ನು ಮಾಡಿಕೊಂಡು ಬಂದದ್ದುಂಟು. ಹೊಸ ಹೊಸ ವಿಧಿ ನಿಷೇಧಗಳನ್ನು ಉಪಾಸನಾ ವಿಧಾನಗಳನ್ನು ಸೇರಿಸಿದ್ದುಂಟು. ಅವುಗಳ ಬಹು ವರ್ಣನಾ, ಸಂಕೀರ್ಣವಾಡಿಕೆಗಳಿಗೆ ಮತ ಸಂಘಟಕರು ಮತ್ತು ಪುರೋಹಿತರು ನಾನಾರೀತಿಗಳಲ್ಲಿ ಕಾಣಿಕೆಗಳನ್ನು ನೀಡಿದ್ದಾರೆ. ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನಗಳ ಫಲವಾಗಿ ಹಬ್ಬಗಳು ಹುಟ್ಟು ಪಡೆದವು. ಹೀಗಾಗಿ ಹಲವು ಸಂಪ್ರದಾಯಗಳ ಮೊತ್ತವೇ ಹಬ್ಬಗಳು.

ಹಬ್ಬಗಳನ್ನು ಸ್ಥೂಲವಾಗಿ ನಾಲ್ಕು ಬಗೆಗಳಾಗಿ ವಿಂಗಡಿಸಬಹುದು. ಮತೀಯ, ಸಾಮಾಜಿಕ, ರಾಷ್ಟ್ರೀಯ ಮತ್ತು ವೈಯುಕ್ತಿಕ. ಆಯಾ ಮತದವರು ತಂತಮ್ಮ ಇಷ್ಟದೇವತೆಗಳ ಉತ್ಸವವನ್ನು ವಿದ್ಯುಕ್ತ ರೀತಿಯಲ್ಲಿ ವರ್ಷಕ್ಕೊಮ್ಮೆ, ಸಾಮೂಹಿಕವಾಗಿ ಆಚರಿಸುವುದುಂಟಷ್ಟೆ. ಶಿವರಾತ್ರಿ, ಕೃಷ್ಣ ಜಯಂತಿ, ಕಾಮನ ಹಬ್ಬ, ಗೌರಿಗಣೇಶೋತ್ಸವ, ರಮ್ಜಾನ್, ಮೊಹರಂ, ಕ್ರಿಸ್‌ಮಸ್, ಬುದ್ಧ ಜಯಂತಿ ಇಂತಹವು ಈ ಗುಂಪಿಗೆ ಸೇರುತ್ತವೆ. ಕೆಲವು ಮನೆತನಗಳಿಗೆ ಅಥವಾ ಒಂದು ಊರಿಗಷ್ಟೇ ಸೇರುವ ಮೀಸಲಾದ ಆಚರಣೆಗಳನ್ನು ಸಾಮಾಜಿಕ ಹಬ್ಬಗಳೆಂದು ನಾಮಕರಣ ಮಾಡಬಹುದು. ಸಾಮಾಜಿಕ ಸಂಪ್ರದಾಯಗಳೇ ಅವುಗಳ ಮೂಲ. ಜಾತಿ, ಕುಲಗೋತ್ರ, ಲಿಂಗವರ್ಣ, ದೇಶ ಭೇದಗಳಿಲ್ಲದೆ ಒಂದು ರಾಷ್ಟ್ರದ ಎಲ್ಲಾ ಜನರು ಒಟ್ಟಾಗಿ ಆಚರಿಸುವ ಉತ್ಸವಗಳನ್ನು ರಾಷ್ಟ್ರೀಯ ಹಬ್ಬಗಳೆನ್ನಬಹುದು. ಒಬ್ಬ ವ್ಯಕ್ತಿಗೆ ಸಂಬಂಧಪಟ್ಟ ಹಾಗೆ ಆಚರಿಸುವ ಹಬ್ಬಗಳನ್ನು ವೈಯುಕ್ತಿಕ ಹಬ್ಬಗಳೆಂದು ಕರೆಯಲಾಗಿದೆ.

ಸಾಮಾನ್ಯವಾಗಿ ಪ್ರತಿವರ್ಷ ಸಾಮಾಜಿಕ ಕ್ಷೇಮಕ್ಕಾಗಿ ವಿಶೇಷ ಸಂದರ್ಭದಲ್ಲಿ ಆಚರಿಸುವ ಜಾನಪದ ಸಂಗತಿಗಳ ಮತ್ತು ಸಂಪ್ರದಾಯಗಳ ಸಮ್ಮಿಶ್ರ ಜಟಿಲ ಘಟಕವೇ ಹಬ್ಬ ಎಂದು

ವಿದ್ವಾಂಸರು ಹೇಳಿದ್ದಾರೆ. ಈ ಹಬ್ಬಗಳ ಸಾಮಾಜಿಕ ಪ್ರಯೋಜನಗಳನ್ನಂತು ನಿರ್ಲಕ್ಷಿಸುವಂತಿಲ್ಲ. ನೆಂಟರಿಷ್ಟರು ಒಂದು ಕಡೆ ಕೂಡುವಾಗ ಮೈತ್ರಿ ಹಿಗ್ಗುತ್ತದೆ. ಭಾವಾತ್ಮಕತೆ, ಕುಸುಮಿಸುತ್ತದೆ. ವಿಚಾರ ವಿನಿಯಮ ಸುಲಭವಾಗುತ್ತದೆ. 'ಬಂಧುಗಳ ದರ್ಶನ ಫಲಾವಲ ಸಂಸಾರ ತರುವಿಂಗೆ' ಎಂಬ ಸುಭಾಷಿತದಂತೆ ಬಂಧುಗಳ ನೆರವಿಯೇ ಹಬ್ಬವಾಗುತ್ತದೆ. ಒಂದು ರೀತಿಯಲ್ಲಿ ಅಂತಹ ನೆರವಿಗಳು ಗ್ರಾಮೀಣ ಜನರ ವಿಚಾರಗೋಷ್ಠಿಗಳಾಗುತ್ತವೆ.

ಒಟ್ಟಿನಲ್ಲಿ ಹಬ್ಬಗಳು ಗ್ರಾಮೀಣ ಜೀವನದ ಸಾಂಸ್ಕೃತಿಕ ಪ್ರೇರಣೆಗಳೆಂದು, ಜಾನಪದರ ರಸಿಕತೆಗೂ, ಕಲಾಭಿಜ್ಞತೆಗೂ ಹಿಡಿದ ಕನ್ನಡಿಗಳೆಂದು ಧಾರಾಳವಾಗಿ ಹೇಳಬಹುದು. ವರ್ಷಕ್ಕೊಮ್ಮೆ ಬರುವ ಹಬ್ಬಗಳಂತೂ ಜೀವನದ ರಸನಿಮಿಷಗಳು. ಬಾಳಿಗೆ ತಂಪೆರೆಯುವ ಅಮೃತ ಬಿಂದುಗಳು. ಪ್ರತಿಯೊಂದು ಹಬ್ಬವೂ ಸಂಪ್ರದಾಯವೂ ಹೌದು, ಸಂಕೀರ್ಣ ಕಲೆಯೂ ಹೌದು. ಆತ್ಮೋದ್ಧಾರ ಸಾಧನದ ಮಾಧ್ಯಮವೂ ಹೌದು. ಹೃದಯ ಹೃದಗಳನ್ನೊಟ್ಟುಗೂಡಿಸುವ ಸೇತುಶಕ್ತಿಯೂ ಹೌದು.

ಈ ಹಿನ್ನೆಲೆಯಲ್ಲಿ ಕೋಗಳಿಯಲ್ಲಿ ಆಚರಿಸಲ್ಪಡುವ ಎಲ್ಲಾ ಹಬ್ಬ-ಹರಿದಿನಗಳಲ್ಲಿಯೂ ಆಂಜನೇಯ ಸ್ವಾಮಿಯ ವಿಶೇಷ ಪೂಜೆಯು ನಡೆಯುತ್ತದೆ. ವರ್ಷದ ಆರಂಭದ ದಿನವಾದ ಯುಗಾದಿಯಲ್ಲಿ ಅಮವಾಸ್ಯೆಯಿಂದ ಹಿಡಿದು ಪಂಚಮಿಯವರೆಗೂ ಐದು ದಿನಗಳವರೆಗೂ ದಿನವಿಡೀ ವಿವಿಧ ರೀತಿಯ ಪೂಜೆಯನ್ನು ಅರ್ಚಕರು ಮಾಡುತ್ತಾರೆ. ಒಂದು ದಿನ ಪಂಚಾಮೃತಾಭಿಷೇಕ ಮತ್ತು ಅರ್ಚನೆ ಮತ್ತೊಂದು ದಿನ ಕುಂಕುಮದಿಂದ, ಎಲೆಯಿಂದ ಆಂಜನೇಯನನ್ನು ಅಲಂಕರಿಸಿ ಬೆಳ್ಳಿಯ ಬಂಗಾರದ ಆಭರಣಗಳನ್ನು ತೊಡಿಸಿ ರೇಷ್ಮೆಯ ವಸ್ತ್ರವನ್ನು ನಡುವಿಗೆ ಸುತ್ತಿ ಬಾಗಿಲಿಗೆ ಹಿತ್ತಾಳೆಯ ಪ್ರಭಾವಳಿಯನ್ನು ಇಟ್ಟು ದೀಪಾಲಂಕಾರ ಮಾಡಿ ಪೂಜಿಸುತ್ತಾರೆ. ಈ ಪ್ರಬಂಧ ಅಧ್ಯಯನಕ್ಕೆ ಒಳಪಡಿಸಿದ ಎಲ್ಲಾ ಆಚರಣೆಗಳನ್ನು ಬಹಳಷ್ಟು ವಿಜೃಂಭಣೆಯಿಂದ ನೆರವೇರಿಸುತ್ತಾರೆ.

ನಾಗರ ಪಂಚಮಿಯ ಸಂದರ್ಭದಲ್ಲಿಯೂ ಆಂಜನೇಯನಿಗೆ ಹಲವಾರು ರೀತಿಯಲ್ಲಿ ಅಲಂಕರಿಸಿ, ಆಭರಣಗಳನ್ನು ತೊಡಿಸಿ ವಿವಿಧ ರೀತಿಯ ಪುಷ್ಪ, ಪತ್ರೆಗಳಿಂದ ಅರ್ಚಕರು ಮಡಿಯಿಂದ ಪೂಜಿಸುತ್ತಾರೆ. ಇಲ್ಲಿಯು ಕೂಡ ಎಲೆ ಪೂಜೆ, ಕುಂಕುಮ ಪೂಜೆ ನಡೆಯುತ್ತದೆ.

ಆಂಜನೇಯನ ದೇವಸ್ಥಾನದ ಆವರಣದಲ್ಲಿಯೇ ನಾಗದೇವತೆಯ ಪ್ರತಿಷ್ಠಾಪನೆಯನ್ನು ಮಾಡಿರುವುದರಿಂದ ಊರಿನ ಎಲ್ಲಾ ಭಕ್ತರು ಎಲ್ಲಾ ವರ್ಗದವರು ನಾಗಪ್ಪನಿಗೆ ಹಾಲೆರೆಯಲು ಬರುವುದುಂಟು. ಹಾಗೆ ಬಂದವರು ಆಂಜನೇಯನ ಪೂಜೆಯನ್ನು ಮಾಡಿಸಿಕೊಂಡು ಕಾಯಿ, ಕರ್ಪೂರ ಅರ್ಪಿಸಿಯೇ ಮರಳುವುದು. ನಾಗರ ಪಂಚಮಿಯ ಮರುದಿನ ಊರಿನ ಎಲ್ಲಾ ಸಮುದಾಯದವರು ಉಲುಪಿಯನ್ನು ಕೊಡುತ್ತಾರೆ. ಅಂದರೆ ಮೊರದಲ್ಲಿ ಅಕ್ಕಿ, ಗೋಧಿ ಹಿಟ್ಟು, ಬೆಲ್ಲ, ಬೇಳೆ, ಎಲೆ-ಅಡಿಕೆ, ತೆಂಗಿನಕಾಯಿ ಮತ್ತು ಐದು ಪಾವುಲಿ ೧-೨೫ರೂ ದಕ್ಷಿಣೆ (ಅದಕ್ಕೂ

ಹೆಚ್ಚು) ಇಟ್ಟು ಆಂಜನೇಯನ ದೇವಸ್ಥಾನಕ್ಕೆ ಒಪ್ಪಿಸಿ ಹೋಗುತ್ತಾರೆ. ಇಲ್ಲಿ ಯಾವ ಮತ-ಬೇದವಿಲ್ಲದೆ ಎಲ್ಲಾ ವರ್ಗದ ಜನಾಂಗದವರು ಈ ಅರ್ಪಣೆಯನ್ನು ಮಾಡುವುದು ಸಂಪ್ರದಾಯ. ಅಂತೆಯೇ ಶ್ರಾವಣ ಮಾಸ ಮುಗಿಯುವವರೆಗೂ ಶ್ರಾವಣ ಶನಿವಾರ ಮತ್ತು ಶ್ರಾವಣ ಸೋಮವಾರಗಳ ದಿನ ವಿಶೇಷ ಪೂಜೆಯನ್ನು ಮಾಡುವುದರ ಜೊತೆಗೆ ಆಂಜನೇಯನನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿಕೊಂಡು ಇಡೀ ಊರಿನ ತುಂಬಾ ಮೆರವಣಿಗೆಯನ್ನು ಭಜನೆಯನ್ನು ಮಾಡುವುದರ ಮುಖಾಂತರ ಮಾಡುತ್ತಾರೆ. ಇದರಿಂದ ಊರಿನಲ್ಲಿನ ವೃದ್ಧರು, ದೇವಸ್ಥಾನಕ್ಕೆ ಬರಲು ಆಗದ ಸ್ಥಿತಿಯಲ್ಲಿರುವವರು ಸ್ವಾಮಿಯ ದರುಶನವನ್ನು ಪಡೆಯಲೆಂದು ಇರಬಹುದು ಎಂದುಕೊಂಡರೆ, ಏಕಕಾಲಕ್ಕೆ ಆ ಊರಿಗೆ ಯಾವುದೇ ರೀತಿಯ ರೋಗ ರುಜಿನಗಳು ಬಾರದಿರಲಿ, ಮಾರಕ ಕಾಯಿಲೆಗಳನ್ನು ಸ್ವಾಮಿ ದೂರ ಮಾಡುತ್ತಾನೆ ಎನ್ನುವ ನಂಬಿಕೆ ಜನಪದರದು.

ಇನ್ನು ಇಡೀ ಊರಿನ ಜನರು ಉಲುಪಿಯನ್ನು ದೇವಸ್ಥಾನಕ್ಕೆ ಕೊಟ್ಟ ಕಾರಣ ಆಂಜನೇಯನ ಅರ್ಚಕರ ಮನೆಯವರು ಹಬ್ಬ ಮುಗಿದ ಮೇಲೆ ಅಲ್ಲಿ ಕೂಡಿದ ದವಸಧಾನ್ಯದಿಂದ ಅಡುಗೆಯನ್ನು ಮಾಡಿ ಪ್ರಸಾದದ ರೂಪದಲ್ಲಿ ಊರಿನ ಜನರಿಗೆ ಉಣಬಡಿಸುತ್ತಾರೆ.

ದಸರಾ ಹಬ್ಬದಲ್ಲಿ ವಿಜಯದಶಮಿಯ ದಿನದಂದು ಊರಿನ ಶಕ್ತಿ ದೇವತೆಯಾದ ಊರಮ್ಮ ದೇವಿಯು ಊರ ಹೊರಗೆ ಇರುವ ಬನ್ನಿ ಮಹಾಂಕಾಳಿ ವೃಕ್ಷಕ್ಕೆ ಹೋಗಿ ಪೂಜೆ ಸಲ್ಲಿಸಿ ದೇವತೆಯು ಬನ್ನಿ ಮುಡಿಯುವುದು ಸಂಪ್ರದಾಯ. ಆದರೆ ಊರಮ್ಮನು ತಾನೊಬ್ಬಳೇ ಹೋಗಿ ಬನ್ನಿ ಮುಡಿದು ಬರುವುದರ ಬದಲು ಜೊತೆಗೆ ತಮ್ಮನನ್ನು ಅಂದರೆ ಆಂಜನೇಯ ಸ್ವಾಮಿಯನ್ನು ಪಲ್ಲಕ್ಕಿಯ ಮೇಲೆ ಕೂಡಿಸಿಕೊಂಡು ಊರಿನ ಇತರೆ ದೇವತೆಗಳೊಂದಿಗೆ ವಾದ್ಯಗಳ ಮುಖಾಂತರ ಹೋಗಿ ಬನ್ನಿ ಮುಡಿದು ಬರುತ್ತಾಳೆ. ನಂತರವೇ ಎಲ್ಲ ಜನರು ಬನ್ನಿಯನ್ನು ಕೊಟ್ಟು ಕೊಳ್ಳುವುದನ್ನು ಮಾಡಿ ಒಬ್ಬರಿಗೊಬ್ಬರು ಶುಭಾಶಯಗಳನ್ನು ವಿತರಿಸಿಕೊಳ್ಳುತ್ತಾರೆ.

ಮಹಾಶಿವರಾತ್ರಿಯ ದಿವಸ ಊರ ಆಚೆ ಇರುವ ಕಲ್ಲೇಶ್ವರ ಸ್ವಾಮಿಯ ದೇವಸ್ಥಾನಕ್ಕೆ ಹೋಗಿ ಈಶ್ವರನನ್ನು ಪೂಜಿಸಿ ಪಂಚಾಮೃತ ಅಭಿಷೇಕ ಮಾಡಿ ಆದಿನ ಹಲವಾರು ಭಕ್ತರು ಉಪವಾಸವನ್ನು ಮಾಡುತ್ತಾರೆ. ಅಂದು ಆಂಜನೇಯ ಸ್ವಾಮಿಯ ಪೂಜೆಯನ್ನು ಭಕ್ತರು ಮಾಡುತ್ತಾರೆ. ಆ ದಿನವೂ ಕೂಡ ಆಂಜನೇಯನನ್ನು ವಿವಿಧ ರೀತಿಯಲ್ಲಿ ಅರ್ಚಕರು ಅಲಂಕರಿಸುತ್ತಾರೆ. ಒಟ್ಟಾರೆ ಊರಿನಲ್ಲಿ ಯಾವುದೇ ಹಬ್ಬಗಳನ್ನು ಮಾಡಿದರೂ ಆಂಜನೇಯನಿಗೆ ಮೊದಲು ಪೂಜೆ ಸಲ್ಲುತ್ತದೆ. ಹಾಗೆಯೇ ಗೌರಿಹಬ್ಬದ ದಿನವೂ ಕೂಡ ಗೌರಿಮಕ್ಕಳು ಆಂಜನೇಯನಿಗೆ ಆರತಿ ಬೆಳಗಿದ ನಂತರವೇ ಗೌರಮ್ಮನಿಗೆ ಆರತಿ ಬೆಳಗುವುದು ವಾಡಿಕೆ.

**ದೀಪೋತ್ಸವ**

ಕಾರ್ತಿಕ ಮಾಸದಲ್ಲಿ ಅಂದರೆ ಡಿಸೆಂಬರ್ ತಿಂಗಳಿನಲ್ಲಿ ದೀಪಾವಳಿ ಅಮವಾಸ್ಯೆಯ ನಂತರ ಪಾಡ್ಯದಿಂದ ಹಿಡಿದು ಒಂದು ತಿಂಗಳ ತನಕ ದೇವಸ್ಥಾನದಲ್ಲಿ ದೀಪ ಹಚ್ಚುವ ಕಾರ್ಯಕ್ರಮವಿರುತ್ತದೆ. ದೀಪೋತ್ಸವವನ್ನು (ಕಾರ್ತಿಕವನ್ನು) ಹರಕೆಯನ್ನು ಹೊತ್ತುಕೊಂಡವರು ಯಾರಾದರೂ ಅದಕ್ಕೆ ಮುಂಚೂಣಿಯಲ್ಲಿದ್ದು ಊರಿನ ಹಿರಿಯರ, ದೈವದವರ ಸಮ್ಮುಖದಲ್ಲಿ ಚಾಲನೆಯನ್ನು ನೀಡುತ್ತಾರೆ. ಕಾರ್ತಿಕೋತ್ಸವ ಪ್ರಾರಂಭ ಮಾಡುವ ದಿನ ಆಂಜನೇಯನಿಗೆ ಅಲಂಕಾರ ಮಾಡಿ ಪೂಜಿಸಿರುತ್ತಾರೆ. ಆ ದಿನವೇ ಸಾಯಂಕಾಲ ದೀಪ ಹಚ್ಚುವ ಕಾರ್ಯಕ್ರಮ ಇರುತ್ತದೆ. ಭಕ್ತರು ಒಬ್ಬೊಬ್ಬರಾಗಿ ಬಂದು ದೀಪಗಳನ್ನು ಹಚ್ಚುತ್ತಾರೆ. ಈ ಕಾರ್ತಿಕೋತ್ಸವಕ್ಕೆ ವಿವಿಧ ಹಳ್ಳಿಗಳಿಂದ ಜನರು ಬಂದಿರುತ್ತಾರೆ. ಆಂಜನೇಯನಲ್ಲಿ ಸೇವೆ ಸಲ್ಲಿಸುವವರು ಡೊಳ್ಳು ಕುಣಿತದ ಮುಖಾಂತರ, ಕೋಲಾಟದ ಮುಖಾಂತರ, ಹಲಗೆಯನ್ನು ಬಾರಿಸುವುದರ ಮುಖಾಂತರ, ಭಜನೆಯನ್ನು ಮಾಡುವುದರ ಮುಖಾಂತರ ಸೇವೆಯನ್ನು ಸಲ್ಲಿಸುತ್ತಾರೆ. ಹಲವಾರು ಭಕ್ತರು ತಾವು ಬೇಡಿಕೊಂಡಂತೆ ತಿಂಗಳು ಮುಗಿಯುವವರೆಗೂ ರಾತ್ರಿ ದೇವಸ್ಥಾನಕ್ಕೆ ಬಂದು ದೀಪಕ್ಕೆ ಎಣ್ಣೆ ಸುರಿದು ದೀಪವನ್ನು ಹಚ್ಚುತ್ತಾರೆ.

ಕಾರ್ತಿಕೋತ್ಸವದ ದಿನ ಊರಲ್ಲಿ ಹಬ್ಬದ ವಾತಾವರಣವಿರುತ್ತದೆ. ಅಂದು ಆಂಜನೇಯಸ್ವಾಮಿಯನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಊರಿನಲ್ಲಿ ಮೆರವಣಿಗೆ ಮಾಡುವುದು ಮತ್ತು ಎಲ್ಲಾ ದೇವರ ದರ್ಶನ ಮಾಡಿಸುವುದು, ಈ ಆಚರಣೆ ಪ್ರತಿವರ್ಷ ಕಾರ್ತಿಕ ಮಾಸದಲ್ಲಿ ನಡೆಯುತ್ತದೆ.

**ಯುಗಾದಿ ಹಬ್ಬದಲ್ಲಿ ಆಂಜನೇಯನ ಆಚರಣೆಗಳು**

ಕೋಗಳಿ ನಾಡಿನಲ್ಲಿ ಆಚರಿಸುತ್ತಿರುವ ಆಚರಣೆಗಳು ಅಷ್ಟಿಷ್ಟಲ್ಲ. ರಾಷ್ಟ್ರೀಯ ಹಬ್ಬಗಳು, ನಾಡ ಹಬ್ಬಗಳು, ಗ್ರಾಮೀಣ ಹಬ್ಬಗಳು, ಅದರಲ್ಲೂ ಗ್ರಾಮೀಣ ಹಬ್ಬಗಳಲ್ಲಿ ವಾರ್ಷಿಕಾವರ್ತನದ ಹಬ್ಬಗಳು ಹೀಗೆ ಹತ್ತು ಹಲವಾರು ಹಬ್ಬಗಳಲ್ಲಿ ವಿವಿಧ ರೀತಿಯ ಆಚರಣೆಗಳನ್ನು ಜನಪದರು ಆಚರಿಸುತ್ತಾ ಬಂದಿದ್ದಾರೆ. ಅವುಗಳಲ್ಲಿ ಯುಗಾದಿಯ ಸಂದರ್ಭದಲ್ಲಿ ಆಂಜನೇಯನಿಗೆ ಸಂಬಂಧಿಸಿದ ಹಾಗೆ ಸಾಂಪ್ರದಾಯಿಕವಾದ ಆಚರಣೆಗಳು ಆಚರಿಸಲ್ಪಡುತ್ತವೆ.

**೩. ಜಾತ್ರೆ**

ಮಾನವ ತನ್ನ ಬೆಳವಣಿಗೆ ಆರಂಭದ ದಿನಗಳಲ್ಲಿ ನಡೆಯುತ್ತಿದ್ದ ಆಚರಣೆ ಪದ್ಧತಿಗಳಿಗೆಲ್ಲ ಧಾರ್ಮಿಕ ಭಾವನೆಯೇ ಪ್ರೇರಕವಾಗಿತ್ತು ಅಥವಾ ಹಿನ್ನೆಲೆಯಾಗಿತ್ತು. ಜನತೆಯ ಬದುಕಿನ ಭಾಗವಾಗಿ ನಡೆಯುವ ಪ್ರತಿ ಆಚರಣೆಗಳಲ್ಲೂ ಇಂತಹ ಧಾರ್ಮಿಕ ಭಾವನೆಗಳನ್ನು ಕಾಣುತ್ತೇವೆ. ಮಾನವನ ಮನಸ್ಸು ಪಕ್ವಗೊಂಡಂತೆಲ್ಲ ಧರ್ಮದ ಬಗೆಗಿನ ಭಾವನೆಗಳು ನಾನಾ ರೀತಿಯಾಗಿ ರೂಪುಗೊಂಡವು. ಪ್ರಕೃತಿಯಲ್ಲಿ ಕಾಣಿಸಿಕೊಳ್ಳುವ ಮಳೆ, ಗುಡುಗು, ಸಿಡಿಲು, ಮಿಂಚು ಇವುಗಳ ಬಗೆಗೆ ತನ್ನದೇ ಆದ ನಿಲುವು ತಾಳಿದ. ಇವುಗಳ ಆರ್ಭಟಗಳಲ್ಲಿ ಬೆಳಕಿನಲ್ಲಿ ಕಾಣದ ಶಕ್ತಿಯ

ಕೈವಾಡವಿದೆ ಎಂದು ಭಾವಿಸಿದ. ಅಂತ ಅಗೋಚರ ಶಕ್ತಿಯನ್ನು ಆರಾಧಿಸುತ್ತಾ ಬಂದ. ಕಲ್ಲು, ಮರ, ಮಣ್ಣುಗಳಲ್ಲಿ ದೈವತ್ವದ ಅಂಶವನ್ನು ಕಂಡುಕೊಳ್ಳುತ್ತಾ ಬಂದ. ಅಂದಿನಿಂದ ಇಂದಿನವರೆಗೂ ಮನುಷ್ಯ ತಿಳಿದೋ ತಿಳಿಯದೆಯೋ ಹಲವಾರು ಆಚರಣೆಗಳನ್ನು ಮಾಡುತ್ತಲೇ ಬಂದಿದ್ದಾನೆ. ನಂಬಿಕೆಗಳು ಈ ಆಚರಣೆಗಳ ಹಿಂಬದಿಯಲ್ಲಿ ಬಲವಾದ ಕೆಲಸ ಮಾಡುತ್ತಿವೆ. ಪ್ರಪಂಚದ ಯಾವುದೇ ಭಾಗದ ಜನರ ಬದುಕನ್ನು ಪರಿಭಾವಿಸಿದರೂ ಅದರಲ್ಲೆಲ್ಲಾ ಈ ನಂಬಿಕೆಗಳು ಪ್ರಭಲ ಕಾರಣವಾಗಿರುತ್ತವೆ.

ಪ್ರತಿನಿತ್ಯವು ಪ್ರತಿವರ್ಷವೂ ನಿಸರ್ಗದ ಮಡಿಲಲ್ಲಿ ನಿರಂತರವಾಗಿ ಶ್ರಮವಹಿಸಿ ದುಡಿಯುವ ಜನತೆ, ಆ ಬದುಕಿನಿಂದ ಸ್ವಲ್ಪ ವಿರಾಮ ಪಡೆದು ನೆಮ್ಮದಿಯ ಉಸಿರು ಬಿಡಲು ಹಬ್ಬ, ತೇರು, ಉತ್ಸವ, ಜಾತ್ರೆ ಮೊದಲಾದ ಸಾಮೂಹಿಕ ಆಚರಣೆಗಳನ್ನು ಕಂಡುಕೊಂಡನು. ಈ ಆಚರಣೆಗಳೆಲ್ಲ ಹುಟ್ಟಿಕೊಂಡದ್ದು ಸಂತೋಷದ ಜೀವನವನ್ನು ನಡೆಸಬೇಕು ಎಂಬ ಉದ್ದೇಶದಿಂದ. ಈ ವಿಧಿಗಳಲ್ಲಿ ಜಾನಪದದ ಭಾಗವೇ ಆಗಿರುವುದರಿಂದ ಇವುಗಳಲ್ಲಿ ವೈಯುಕ್ತಿಕ ಕಾಳಜಿಗಿಂತ ಸಮಷ್ಟಿಯ ಹಿತಾಶಕ್ತಿಯ ಕಡೆಗೆ ಒಲವು ಮೂಡಿತು. ಸಮಾಜದ ಹಿತಾರಕ್ಷಣೆಯೇ ಇವುಗಳ ಮುಖ್ಯ ಉದ್ದೇಶವಾಯಿತು. ಇಂತಹ ಉದ್ದೇಶವನ್ನು ಅಭಿವ್ಯಕ್ತಿಸುವ ಹಲವು ಆಚರಣೆಗಳಲ್ಲಿ ಜಾತ್ರೆಗಳು ತುಂಬಾ ಪ್ರಮುಖ ಪಾತ್ರವಹಿಸುತ್ತವೆ.

ಈ ಜಾತ್ರೆಗಳು ನಮ್ಮ ನಾಡಿನಲ್ಲಿ ಜರುಗುವ ಸ್ಥಳದ ಹೆಸರಿನಿಂದ ಅಥವಾ ಅಲ್ಲಿಯ ದೈವದ ಹೆಸರಿನಿಂದ ಜನಪ್ರಿಯವಾಗಿರುವುದುಂಟು. ಜಾತ್ರೆಗಳು ಸಮಸ್ಥ ಸಾಮಾಜಿಕ ಪರಂಪರೆಯ ಅಭಿವ್ಯಕ್ತಿಯಾಗಿರುವ ಜಾನಪದದ ಅನೇಕ ಅಂಶಗಳನ್ನು ಒಳಗೊಂಡಿರುವಂತವುಗಳು. ಅಂತೆಯೇ ಜಾತ್ರೆಯ ಸಮಯದಲ್ಲಿ ನಡೆಯುವ ಸಂಕೀರ್ಣ ಸ್ವರೂಪದ ಚಟುವಟಿಕೆಗಳೆಲ್ಲ ಸಾಮೂಹಿಕವಾಗಿ ನಡೆಯುವಂತವುಗಳು. ಯಾವುದೋ ಒಂದು ನಿಗಧಿಯಾದ ವೇಳೆಯಲ್ಲಿ ಜನರೆಲ್ಲ ಸೇರಿ ದೇವರನ್ನು ಆರಾಧಿಸುವುದಕ್ಕೆ ಜಾತ್ರೆ ಎಂದು ಕರೆಯುತ್ತಾ ಬಂದಿದ್ದೇವೆ. ಜನಪದ ಸಂಸ್ಕೃತಿಗಳಿಂದ ಕೂಡಿರುವಂತಹ ನಮ್ಮ ಗ್ರಾಮೀಣರ ಜಾತ್ರೆಗಳು, ಸ್ನೇಹ, ಸಹಕಾರ ಸಂಬಂಧಗಳು ಬೆಳೆದುಕೊಂಡು ಬಂದ ಸ್ಥಳಗಳಲ್ಲಿ ಜರುಗುವ ಜಾತ್ರೆಗಳು ಸಾಮಾನ್ಯವಾಗಿ ಹಳ್ಳಿಗರ ಅಧೀನದಲ್ಲಿಯೇ ಮುಂದುವರೆಯುತ್ತಾ ಬಂದವು.

ಯಾವುದೇ ಒಂದು ಜಾತಿಗೆ ಸಂಬಂಧಿಸಿದಂತೆ ಜಾತ್ರೆ ನಡೆಯುತ್ತಿರುವಾಗಲೂ ಎಲ್ಲ ವರ್ಗದವರು ಭಾಗವಹಿಸಿ ಅದು ತಮ್ಮ ದೈವವೇ ಎಂದು ಭಾವಿಸುವ ಜನತೆ ಗ್ರಾಮಿಲಾರು. ಹೀಗೆ ಆಚರಿಸುವ ಆಚರಣೆಗಳಲ್ಲಿ ಎಲ್ಲರೂ ಕಾಣಿಸಿಕೊಳ್ಳುತ್ತಾರೆ. ಇಲ್ಲಿ ಭಾವನಾತ್ಮಕ ಏಕತೆಯಿರುತ್ತದೆ. ಜಾತ್ರೆ ಎಂಬ ಪದಕ್ಕೆ ಪುಣ್ಯ ಕ್ಷೇತ್ರ ದರ್ಶನ ಮೊದಲಾದ ಧಾರ್ಮಿಕ ಉದ್ದೇಶದಿಂದ ಮಾಡುವ ಪ್ರಯಾಣ, ಯಾತ್ರೆ, ಎಂದು ನಿಘಂಟುಗಳ ಅರ್ಥ ವಿವರಣೆಯಿದೆ. ಅಲ್ಲದೆ ಯಾವುದೇ ಒಂದು ದೇವತೆಯ ರಥೋತ್ಸವವೇ ಮೊದಲಾದ ವಿಶೇಷ ಕಾರ್ಯಕ್ರಮವನ್ನು ಜಾತ್ರೆಗಿರುವ ಅರ್ಥವೆಂದು

ವರ್ಣಿಸಲಾಗಿದೆ. ದೇವರ ರಥೋತ್ಸವ ಮುಂತಾದ ಸಂದರ್ಭದಲ್ಲಿ ಸೇರುವ ಜನರ ಗುಂಪು, ಸಮೂಹ, ಪರಿಸೆ ಎಂಬ ಅರ್ಥಗಳನ್ನು ಹೇಳಲಾಗಿದೆ.

ಜಾತ್ರೆಗೆ, ತೀರ್ಥಯಾತ್ರೆಗೆ ಪ್ರಯಾಣ ಹೊರಟ ಯಾತ್ರಾರ್ಥಿಯನ್ನು ಜಾತ್ರಿಗ ಎಂದು ಕರೆಯಲಾಗಿದೆ. (ಕ.ಸಾ.ಪ.ಕ.ಕ.ನಿಘಂಟು ಸಂಪುಟ ೩; ಪುಟ.೩೦೩೭) ಕನ್ನಡಿಗರ ಬದುಕಿನಲ್ಲಿ ಈ ಜಾತ್ರೆ ಪರಿಸೆ, ತೇರು, ಎಷ್ಟರಮಟ್ಟಿಗೆ ಹಾಸುಹೊಕ್ಕಾಗಿ ಬೆರೆತುಕೊಂಡಿವೆಯೆಂದರೆ ನಿತ್ಯದ ಜೀವನದಲ್ಲಿ ಇವುಗಳ ಸಂಬಂಧವಾದ ಗಾದೆಗಳು ಹುಟ್ಟಿ ಬೆಳೆದುಕೊಂಡು ಬಂದಿವೆ. ಕೇರಿಗೊಬ್ಬ ಹನುಮಪ್ಪ, ಊರಿಗೊಂದು ಜಾತ್ರೆ, ಜಾತ್ರೆಗೆ ಹೋಗೋನು ಜಾಣ, ದಿಬ್ಬಣಕ್ಕೆ ಹೋಗೋನು ಕೋಣ, ತೇರು ಎಳೀತು ದವನ ಮುಡೀತು ಹೋಳಿಗೆ ಇಲ್ಲದ ಹಬ್ಬವಿಲ್ಲ ರಥವಿಲ್ಲದ ಜಾತ್ರೆಯಿಲ್ಲ ಹೀಗೆ ಹಬ್ಬಗಳಿಗೂ, ಜಾತ್ರೆಗಳಿಗೂ, ತೇರಿಗೂ ನಿಕಟವಾದ ಸಂಬಂಧವಿದೆ. ಒಂದನ್ನು ಬಿಟ್ಟು ಒಂದು ಇರಲಾರವು. ಆರ್ಯ ಅಥವಾ ವಿಶಿಷ್ಟ ದೇವತೆಗಳ ಜಾತ್ರೆಗಿಂತ ದ್ರಾವಿಡ ಹಾಗೂ ಗ್ರಾಮದೇವತೆಗಳ ಜಾತ್ರೆಗಳು ಜಾನಪದ ಅಧ್ಯಯನಕ್ಕೆ ಹೆಚ್ಚು ಗ್ರಾಸ ಒದಗಿಸುತ್ತವೆ. ಅಂತೆಯೇ ಆಂಜನೇಯನು ದ್ರಾವಿಡ ವರ್ಗಕ್ಕೆ ಸೇರಿದ ದೇವತೆಯಾಗಿದ್ದಾನೆ.

ಜಾತ್ರೆ ಎಂಬ ಶಬ್ದವು ಸಂಸ್ಕೃತದ ನಿಷ್ಪನ್ನವಾಗಿದೆ. ಯಾತ್ರಾದಿಂದ ಜಾತ್ರೆ ಪದ ತತ್ಸಮ-ತದ್ಭವದ ರೂಪದಲ್ಲಿ ಬಂದುದಾಗಿದೆ. ಜಾತ್ರೆ ಎಂಬುದು ವರ್ಷಕ್ಕೋ ನಿಗಧಿಯಾದ ಇನ್ನಿತರ ಅವಧಿಗೆ ಗೊತ್ತಾದ ಸ್ಥಳದಲ್ಲಿ ಒಂದು ದಿನವೋ ಇನ್ನೂ ಹೆಚ್ಚಿನ ದಿನಗಳವರೆಗೋ ನಡೆಯುವುದು ರೂಢಿ. ಈ ಮಹೋತ್ಸವಗಳಲ್ಲಿ ಸಾಮಾನ್ಯವಾಗಿ ತೇರನ್ನು ಎಳೆಯುವುದು ಒಂದು ಮುಖ್ಯ ಭಾಗವಾಗಿರುತ್ತದೆ.

ಕರ್ನಾಟಕದ ಯಾವುದೇ ಗ್ರಾಮದಲ್ಲಿಯೇ ಆಗಲಿ, ಗ್ರಾಮದೇವತೆಗಳಿಗೆ ಹರಕೆಯ ರೂಪದಲ್ಲಿ ಬಂದ ಧಾನ್ಯಗಳಿಂದ ಅಡುಗೆ ಮಾಡಿ ಜಾತ್ರೆಯ ಸಂದರ್ಭದಲ್ಲಿ ಊರಿನ ಜನಕ್ಕೆ ಊಟಕ್ಕೆ ಬಡಿಸುವ ಪದ್ಧತಿಗಳಿವೆ. ಈ ರೀತಿ ಊಟ ಬಡಿಸುವ ವ್ಯವಸ್ಥೆಗೆ ಅರವಟಿಗೆಗಳು ಎಂದು ಹೆಸರು. ಜಾತ್ರೆ ನಡೆಯುವ ಸ್ಥಳದ ದೈವವನ್ನು, ಅದರ ಪ್ರತೀಕವಾಗಿರುವ ಉತ್ಸವ (ಉಚ್ಚಾಯ) ಮೂರ್ತಿಯನ್ನು ತೇರಿನಲ್ಲಿ ಕೂಡಿಸಿ ಭಕ್ತರು ಸೇರಿ ಎಳೆಯುತ್ತಾರೆ. ಇಂತಹ ತೇರಿಗೆ-ಬಂಡಿ, ರಥ, ಕುರ್ಜು, ವಾನ್ಯೇವು ಎಂಬ ಹೆಸರುಗಳು ಇವೆ. ಇತ್ತೀಚೆಗೆ ಆಂಗ್ಲ ಭಾಷೆಯ ಪ್ರಭಾವದಿಂದಾಗಿ ತೇರಿಗೆ-ಕಾರ್ ಎಂದು ಕರೆಯಲಾಗುತ್ತಿದೆ. ರಥೋತ್ಸವ ಇಲ್ಲವೇ ತೇರನ್ನು ಕಾರ್ ಫೆಸ್ಟಿವಲ್ ಎಂದು ಉಲ್ಲೇಖಿಸುತ್ತಿದ್ದಾರೆ. ತೇರು ಬೀದಿ ಅಥವಾ ರಥ ಬೀದಿಗೆ ಅಂಚೆ ವಿಳಾಸದಲ್ಲಿ ಕಾರ್‌ಸ್ಟ್ರೀಟ್ ಎಂದು ಬರೆಯುವುದು ಕಾಣಸಿಗುತ್ತದೆ. ಒಂದು ಅರ್ಥದಲ್ಲಿ ತೇರು ಕೂಡ ವಾಹನವೇ. ಕಾರು, ಬಂಡಿ, ಗಾಡಿ, ಮನುಷ್ಯರ ವಾಹನವಾದರೆ ಈ ತೇರು ದೇವರ ವಾಹನ. ವಾಸ್ತವವಾಗಿ ಈ ಪದದ ಮೂಲ ಅರ್ಥ ಒಂದು ಬಗೆಯ ವಾಹನ ಎಂದಷ್ಟೆ ಇತ್ತು. ತೇರು ಎಂಬುದು ಅಚ್ಚ ದ್ರಾವಿಡ ಪದ. ದ್ರಾವಿಡ ದೇವತೆಯಾದ ಆಂಜನೇಯ ಅಥವಾ ಹನುಮಪ್ಪನ ತೇರು ಅಥವಾ ರಥೋತ್ಸವವು ಕೋಗಳಿಯಲ್ಲಿ ಯುಗಾದಿಯ ಸಂದರ್ಭದಲ್ಲಿ ಜರುಗುತ್ತದೆ.

ಸ್ವಸ್ತಿಶ್ರೀ ವಿಜಯಾಭ್ಯುದಯ ಶ್ರೀಮನ್ನೃಪ ಶಾಲಿವಾಹನ ಶಕೆ ೧೯೨೮ನೇ ವ್ಯಯನಾಮ ಸಂವತ್ಸರ-ಪಾಲ್ಗುಣ ಶ್ರೀಶಕೆ ೧೯೨೯ ಸರ್ವಜಿತು ನಾಮ ಸಂವತ್ಸರ ಚೈತ್ರ ಶುದ್ಧ ಪಾಢ್ಯದ ದಿನದಂದು ಬೆಳಗ್ಗೆ ಕಂಕಣ ಕಟ್ಟುವುದು, ರಥಕ್ಕೆ ಕಳಶೋತ್ಸವ, ಸಾಯಂಕಾಲ ಉತ್ಸವಮೂರ್ತಿ ಅಥವಾ ಹುಚ್ಚಯ್ಯನ ಮೆರವಣಿಗೆ

ಚೈತ್ರ ಶುದ್ಧ ಬಿದಿಗಿಯ ದಿನ ರಥೋತ್ಸವ

ಚೈತ್ರ ಶುದ್ಧ ತದಿಗಿಯ ದಿನ ಕುಂಕುಮ ಪೂಜೆ, ಎಲೆಪೂಜೆ

ಚೈತ್ರ ಶುದ್ಧ ಚೌತಿಯ ದಿನ ಮುಳ್ಳುಪವಾಡ

ಚೈತ್ರ ಶುದ್ಧ ಪಂಚಮಿಯ ದಿನ – ಓಕುಳಿಯಾಡುವುದು

ಚೈತ್ರ ಶುದ್ಧ ಷಷ್ಠಿಯ ದಿನ ಕಡುಬಿನ ಕಾಳಗ, ಬೇಟೆಗೆ ಹೋಗುವುದು

ಹೀಗೆ ನಾಲ್ಕಾರು ದಿನಗಳವರೆಗೆ ಆಂಜನೇಯನ ಕಾರ್ಯಕ್ರಮಗಳು ಯುಗಾದಿಯಲ್ಲಿ ಜರುಗುತ್ತದೆ.

**ಕಂಕಣ ಕಟ್ಟುವುದು**

ಚಂದ್ರಮಾನ ಯುಗಾದಿಯ ಪಾಢ್ಯದ ದಿನದಂದು ಹಬ್ಬದ ಐದಾರು ದಿನಗಳವರೆಗೂ ನಡೆಯುವ ಸರ್ವಕಾರ್ಯಕ್ಕೂ ಪೀಠಿಕೆಯೆಂಬಂತೆ ಕಂಕಣಧಾರಣ ಮಾಡುವುದು ಅಥವಾ ಕಂಕಣ ಕಟ್ಟುವುದು ಪದ್ಧತಿ. ಕಂಕಣಧಾರಣ ಮಾಡಿಕೊಂಡವರು ಎಲ್ಲಾ ದೇವತಾ ಕಾರ್ಯದಲ್ಲಿ ಸಕ್ರಿಯವಾಗಿ ಭಾಗವಹಿಸಲು ಮತ್ತು ಜವಾಬ್ದಾರಿಯುವಾಗಿ ನಿಂತು ಕಾರ್ಯಕ್ರಮಗಳನ್ನು ಮಾಡುವ ಗೌರವಾರ್ಥವಾಗಿ ಹಿರಿತನದ ಭಾವನೆಯಲ್ಲಿ ಸ್ಫೂರ್ತಿಗೊಂಡು ಕಾರ್ಯಕ್ರಮ ಹಮ್ಮಿಕೊಂಡು ದೇವತಾ ಕಾರ್ಯಗಳಲ್ಲಿ ಭಾಗವಹಿಸುವುದು ಕಂಕಣ ಕಟ್ಟುವುದರ ಉದ್ದೇಶವಾಗಿದೆ.

ಈ ಕಂಕಣ ಕಟ್ಟುವ ಸಮಯದಲ್ಲಿ ೯ ಜನರನ್ನು ತೋಳುಗಳಿಗೆ ಒಬ್ಬರಂತೆ ಆಯ್ಕೆ ಮಾಡಿ ಕಂಕಣವನ್ನು ಕಟ್ಟುತ್ತಾರೆ. ಕಂಕಣ ಕಟ್ಟಿಕೊಂಡವರು ಮೂರು-ನಾಲ್ಕು ದಿನಗಳವರೆಗೆ ಯುಗಾದಿ ಹಬ್ಬದ ಸಂಕೇತ ಮತ್ತು ಸಾಂಪ್ರದಾಯಿಕವಾಗಿರುವ ಧರ್ಮದ ಹಿನ್ನೆಲೆಯನ್ನು ಒಳಗೊಂಡು, ಜನಪದ ಸಂಸ್ಕೃತಿಯನ್ನು ಬಿಂಬಿಸುವ ಈ ಕಾರ್ಯಕ್ರಮಗಳು ಸಂಪೂರ್ಣ ಮುಗಿದು ಕಂಕಣ ಬಿಚ್ಚುವ ವರೆಗೂ ಕಂಕಣಧಾರಿಗಳು ನಿರಾಹಾರಿಗಳಾಗಿ ಶ್ರದ್ಧೆಯಿಂದ ಕಾಯ-ವಾಚ-ಮನಸ ಕಾರ್ಯಕ್ರಮಗಳನ್ನು ನೆರವೇರಿಸುತ್ತಾರೆ. ಅಷ್ಟು ದಿನಗಳವರೆಗೂ ಇವರು ನಿರಾಹಾರಿಗಳಾಗಿದ್ದು ದ್ರವರೂಪದ ಆಹಾರವನ್ನು ಅಂದರೆ ಹಾಲನ್ನು ಮಾತ್ರ ಸ್ವೀಕರಿಸುತ್ತಾರೆ.

**ಉತ್ಸವ ಅಥವಾ ಹುಚ್ಚಯ್ಯ ಮೂರ್ತಿಯ ಪೂಜೆ**

ಹಬ್ಬ, ಜಾತ್ರೆ, ರಥೋತ್ಸವವು ಪ್ರಾರಂಭವಾದ ಸೂಚನೆಯಾಗಿ 'ಹುಚ್ಚಯ' ಸಿದ್ಧಗೊಳಿಸಲಾಗುತ್ತದೆ. ಎತ್ತಿನ ಬಂಡಿಯ ಮೇಲೆ ಮಂಚವನ್ನು ಅಥವಾ ಅಗಲವಾದ ಮಣಿಯನ್ನು (ಹಲಗೆಯನ್ನು) ಹಾಕಿ, ಮಂಚದಿಂದ ಬಂಡಿಯ ಉದ್ದಕ್ಕೂ ಬಿಳಿಯ ಬಟ್ಟೆಯನ್ನು

ಸುತ್ತಿ ಅಲಂಕಾರಗೊಳಿಸಿ ಬಂಡಿಯಲ್ಲಿನ ಮಂಚದ ಮೇಲೆ ಖುರ್ಚಿಯನ್ನು ಇಟ್ಟು ಅದರಲ್ಲಿ ಅಯ್ಯನವರನ್ನು ಕೂಡಿಸಿ, ಕೊರಳಲ್ಲಿ ದಾಗೀನ(ಆಭರಣ) ಹಾಕಿ ಹಸಿರು ಸೀರೆ ಉಟ್ಟುಕೊಂಡು ನಿಂತಿರುವ ಇಬ್ಬರು ಸ್ತ್ರೀಯರು ಅಯ್ಯನವರಿಗೆ ಚವರ ಬೀಸಲು ಪ್ರಾರಂಭಿಸುತ್ತಾರೆ. ಬಂಡಿಗೆ ಎತ್ತು ಹೂಡಿಕೊಂಡು ಮೆರವಣಿಗೆಯನ್ನು ಮುಂದೆ ಸಾಗಿಸುತ್ತಾರೆ. ಮೆರವಣಿಗೆಯ ಮುಂಚೂಣಿಯಲ್ಲಿ ಡೊಳ್ಳು ಮೇಳ ನಂತರ ಶಹನಾಯಿ ಮೇಳ ಹಾಗೂ ಭಜನಾ ಮೇಳಗಳು ಹುಚ್ಚಯ್ಯದ ಹಿಂದೆ ಹೆಂಗಳೆಯರು ಆರತಿ ಹಿಡಿದು ಹಾಡುತ್ತಾ ಬರುತ್ತಾರೆ. ಹುಚ್ಚಯ್ಯದ ಮೆರವಣಿಗೆಯ ಮರುದಿನವೇ ರಥೋತ್ಸವ ಜರುಗುತ್ತದೆ. ಹುಚ್ಚಯ್ಯ ಮರುದಿನ ಸಂಜೆ ವಾದ್ಯ ವೈಭವಗಳೊಂದಿಗೆ ಅಯ್ಯನವರನ್ನು ಮೆರವಣಿಗೆಯ ಮುಖಾಂತರ ಜಾತ್ರೆಯ ಸ್ಥಳಕ್ಕೆ ಕರೆದುಕೊಂಡು ಬರಲಾಗುತ್ತದೆ. ಅವರು ನಿಂತಿರುವ ರಥದ ಸುತ್ತಲು ಪ್ರದಕ್ಷಿಣೆ ಹಾಕಿ ಅಲ್ಲಿಂದ ಉದ್ದಕ್ಕೂ ಅಲ್ಲಿ ನೆರೆದವರಿಗೆ ಕಡುಬನ್ನು ವಿತರಿಸುತ್ತಾರೆ. ಮತ್ತು ರಥೋತ್ಸವದ ಸಮಯದಲ್ಲಿ ತೇರು ಏರಿದಾಗ ಭಕ್ತರು ಎಸೆಯುವ ಬಾಳೆ ಹಣ್ಣುಗಳನ್ನು ಕೂಡಿಸಿಟ್ಟುಕೊಂಡು ಅವುಗಳನ್ನು ಜನರೆಡೆಗೆ ಎಸೆಯುತ್ತಾರೆ. ಭಾವುಕ ಭಕ್ತರೆಲ್ಲರೂ ಅವನ್ನು ಆಯ್ದುಕೊಂಡು ತಿನ್ನುವುದುಂಟು.

ಈ ರೀತಿ ನಡೆಯುವ ಹುಚ್ಚಯ ಮೂರ್ತಿಯ ಪೂಜೆಯು ಕೋಗಳಿಯಲ್ಲಿ ಯುಗಾದಿ ಹಬ್ಬದಲ್ಲಿ ಅಥವಾ ಪಾಡ್ಯದ ದಿನವೇ ಉತ್ಸವ ಮೂರ್ತಿಯ ಪೂಜೆ ನಡೆಯುತ್ತದೆ. ಹಗುರವಾದ ಬಿದಿರಿನ ರಥಕ್ಕೆ ಹಗುರವಾಗಿ ಶೃಂಗರಿಸಿಕೊಂಡು, ಬಿದಿರಿನ ರಥಕ್ಕೆ ಕೆಂಪು ಬಟ್ಟೆಯನ್ನು ಮತ್ತು ಸೀರೆಯನ್ನು ಕಟ್ಟಿ ಅಲಂಕರಿಸಿಕೊಂಡು ಸರ್ವಮತೀಯರು ಸೋದರ ವಾತ್ಸಲ್ಯದಿಂದ ತಮ್ಮ ಹಿರಿಯರ ತಮ್ಮ ಧರ್ಮದ, ತಮ್ಮ ಪರಂಪರೆಯ ಆಚರಣೆಗನುಗುಣವಾಗಿ ಉತ್ಸವ ಮೂರ್ತಿಯನ್ನು ಎಲ್ಲಾ ಬೀದಿಗಳಲ್ಲಿಯೂ ಎಳೆದುಕೊಂಡು ಹೋಗಿ ಮೆರವಣಿಗೆ ಮಾಡುತ್ತಾರೆ. ಇದರ ಉದ್ದೇಶ ಊರಿನಲ್ಲಿಯ ವಯೋವೃದ್ಧರು ಅಂಗವಿಕಲರು ಮುಂತಾದವರು ಊರಿನ ಆಂಜನೇಯನ ದೇವಸ್ಥಾನಕ್ಕೆ ಮತ್ತು ರಥೋತ್ಸವದ ಬೀದಿಗೆ ಬಂದು ರಥವನ್ನು ನೋಡದ ಸ್ಥಿತಿಯಲ್ಲಿರುವವರು ಉತ್ಸವ ಮೂರ್ತಿಯ ಮೆರವಣಿಗೆಯನ್ನು ನೋಡಿ ಸಂತೋಷಪಡಲೆಂದು ಇರಬಹುದು. ಅಲ್ಲಿಯೇ ಅವರೆಲ್ಲರೂ ಉತ್ಸವ ಮೂರ್ತಿಗೆ ಕೈಮುಗಿದು ತಮ್ಮ ಭಕ್ತಿಯನ್ನು ಸಮರ್ಥಿಸುತ್ತಾರೆ. ಅಲ್ಲದೆ ಊರಿನ ಮೂಲೆ ಮೂಲೆಗಳಲ್ಲಿಯೂ ಮತ್ತು ಬೀದಿ-ಬೀದಿಗಳಲ್ಲಿಯೂ ಮೆರವಣಿಗೆ ಮಾಡುವುದರಿಂದ ಊರಿಗೆ ತಟ್ಟುವ ಅಥವಾ ಸಂಭವಿಸುವ ಮಾರಕ ರೋಗಗಳು ಬಾರದಿರಲಿ ಎನ್ನುವ ನಂಬಿಕೆ ಕೋಗಳಿ ನಾಡಿನ ಜನಪದರದು. ಆದಿನ ವೈಜ್ಞಾನಿಕ ಹಿನ್ನೆಲೆಯನ್ನು ಒಳಗೊಂಡಂತಹ ಅಡುಗೆಯಾದ ಬೇವು-ಬೆಲ್ಲ ಮಿಶ್ರಿತ ಆಹಾರವನ್ನು ತಯಾರಿಸಿ ಅದರ ಜೊತೆಗೆ ಶ್ಯಾವಿಗೆ-ಸೂಸಲ ಮಾಡಿಕೊಂಡು ಊಟ ಮಾಡುವುದು ರೂಢಿ. ಇದು ಸುಲಭವಾಗಿ ಜೀರ್ಣಿಸಿಕೊಳ್ಳುವುದಕ್ಕೆ ಸಹಾಯಕಾರಿಯೂ ಕೂಡ. ಹಾಗೆ ಲೌಕಿಕ ಬದುಕಿನ ಸಾಮಾಜಿಕ ಜೀವನದಲ್ಲಿ ಮನುಷ್ಯನು ಸಹಿಕಹಿಗಳನ್ನು ದುಃಖ ಸಂತಸಗಳನ್ನು ಬಡತನ - ಸಿರಿತನಗಳನ್ನು ಸಮಾನವಾಗಿ ಸ್ವೀಕರಿಸಿ ಜೀವನ ಸಾಗಿಸುವಲ್ಲಿ ಅಚಲರಾಗದೆ ಸಬಲತನದ ಮನಸ್ಸಿನಿಂದ ಜೀವನ ಸಾಗಿಸುವ ದಾರಿದೀವಿಗೆಯಾಗಿಯೂ ತಮ್ಮ ಊಟ-ಉಡುಗೆ, ತಿಂಡಿ-ತಿನಿಸುಗಳು ಮಾರ್ಗಸೂಚಿಯಾಗುತ್ತವೆ ಎಂದು ಅಲ್ಲಿನ ಜನರ ನಂಬಿಕೆಯಾಗಿದೆ.

ಉತ್ಸವ ಮೂರ್ತಿಯ ವೈಭವಯುತವಾದ ಮೆರವಣಿಗೆ ಮುಗಿದ ನಂತರ ಕಾರ್ಯಕ್ರಮದಲ್ಲಿ ಪಾಲ್ಗೊಂಡ ಹಿರಿಯರೆಲ್ಲರೂ ಒಂದೆಡೆ ದೇವಸ್ಥಾನದಲ್ಲಿ ಸೇರಿ ಮುಂದೆ ನಡೆಯುವ ಆಂಜನೇಯನ ಕಾರ್ಯಕ್ರಮದ ಸಮಾಲೋಚನೆಯನ್ನು ಮಾಡಿ ಮುಂದಿನ ಕೆಲಸಕ್ಕೆ ಆ ರಾತ್ರಿಯಲ್ಲಿ ಸಿದ್ಧತೆಯನ್ನು ನಡೆಸುತ್ತಾರೆ.

**ರಥೋತ್ಸವ**

ಆಂಜನೇಯನ ತೇರು, ರಥೋತ್ಸವ ಎಂದೆಲ್ಲಾ ಕರೆಯಿಸಿಕೊಳ್ಳುವ ಈ ಉತ್ಸವವು ಕೋಗಳಿಯಲ್ಲಿ ಚಂದ್ರಮಾನ ಯುಗಾದಿಯ ಬಿದಿಗಿಯ ದಿನದಂದು ಜರುಗುತ್ತದೆ. ಕರ್ನಾಟಕದ ಬಹುತೇಕ ಗ್ರಾಮಗಳಲ್ಲಿ ಮತ್ತು ಪಟ್ಟಣಗಳಲ್ಲಿಯಾಗಲಿ ಆಂಜನೇಯನಿಗೆ ಸಂಬಂಧಿಸಿದ ಜಾತ್ರೆ, ಉತ್ಸವ, ತೇರು ಮುಂತಾದ ಕಾರ್ಯಕ್ರಮಗಳು ಯುಗಾದಿಯ ನಂತರವೇ ರಾಮನವಮಿಯ ಸಮೀಪ ಹಿಂದು-ಮುಂದು ನಡೆಯುವುದು ರೂಢಿಯಲ್ಲಿದೆ. ರಾಮಾಯಣದ ಕಥಾನಾಯಕ ಶ್ರೀರಾಮನು ಒಳ್ಳೆಯ ಆಡಳಿತಗಾರ, ವೀರ, ಶೂರ, ದೈವಿಸಂಭೂತ, ಧರ್ಮಸಹಿಷ್ಣು, ಏಕಪತ್ನಿವ್ರತಸ್ಥನಾಗಿ ಖ್ಯಾತಿಯನ್ನು ಹೊತ್ತಿದ್ದರೂ ಈ ಶ್ರೀರಾಮನವಮಿಯ ಸುತ್ತಮುತ್ತ ಈತನ ಪರಮಭಕ್ತನಾದ ಹನುಮಂತನ ಕುರಿತು ನಡೆದುಕೊಂಡು ಬಂದಿರುವ ಜಾತ್ರೆ ಹಬ್ಬ-ಉತ್ಸವಗಳನ್ನು ನೋಡಿದರೆ ಆ ಸಂದರ್ಭದೊಳಗೆ ರಾಮಧೂತನಾಗಿ ರಾಮನ ಏಳಿಗೆಗಾಗಿ ಕಾಳಜಿಯನ್ನು ಹನುಮಂತನು ಸಾಕಷ್ಟು ಮಾಡಿದ್ದಾನೆ. ಜನತೆ ರಾಮನನ್ನೆ ಮರೆತು ಹನುಮಂತನನ್ನು ಪೂಜಿಸುವಷ್ಟು ಪ್ರಭಾವಿ ವ್ಯಕ್ತಿತ್ವವುಳ್ಳವನು ಈತನಾಗಿದ್ದಾನೆ. ಕೋಗಳಿಯ ಆಂಜನೇಯನ ರಥೋತ್ಸವಕ್ಕೆ ಸಂಬಂಧಿಸಿದಂತೆ ಊರಿನ ಮುಖಂಡರೆಲ್ಲರೂ ಚಂದ್ರಮಾನ ಯುಗಾದಿಯ ಪಾಡ್ಯದ ದಿನದಂದು ಉತ್ಸವ ಮೂರ್ತಿಯ ಮೆರವಣಿಗೆಯಾದ ಬಳಿಕ ಒಂದೆಡೆ ದೇವಸ್ಥಾನದಲ್ಲಿ ಸೇರಿ ರಥೋತ್ಸವ ಮೈದಾನದ ದಾರಿಯ ವ್ಯವಸ್ಥೆಗಳನ್ನು ಮುಂಜಾಗೃತವಾಗಿ ಪರಿಶೀಲಿಸುತ್ತಾರೆ. ರಥೋತ್ಸವದಂತಹ ಉತ್ಸವಗಳು ಗ್ರಾಮದಲ್ಲಿರುವ ಸರ್ವಮತೀಯರ ಐಕ್ಯತೆಯನ್ನು ಬಿಂಬಿಸುವ ದ್ಯೋತಕವಾಗಿರುತ್ತದೆ. ಎಲ್ಲರೂ ಸೋದರ ಭಾವದಿಂದ ರಥೋತ್ಸವದ ಪೂರ್ವ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಜವಾಬ್ದಾರಿಯುತವಾದ ಕೆಲಸ ಕಾರ್ಯಗಳನ್ನು ರಥವನ್ನು ಒಂದರ ಮೇಲೊಂದು ಅಂತಸ್ತುಗಳಿರುವಂತೆ ಪ್ರತಿ ಜಾತ್ರೆಯ ಸಮಯದಲ್ಲಿ ಹೊಸದಾಗಿ ತೇರನ್ನು ಕಟ್ಟುವುದುಂಟು. ರಥವನ್ನು ಮೇಲ್ಭಾಗ, ಮಧ್ಯಭಾಗ, ಕೆಳಭಾಗ ಎಂದು ಸ್ಥೂಲವಾಗಿ ವಿಭಜಿಸಲಾಗಿ ಸಾಮಾನ್ಯವಾಗಿ ರಥದ ಕೆಳಗಿನ ಭಾಗ ಸ್ಥಾಯಿಯಾಗಿ ಇರುತ್ತದೆ. ಚಕ್ರಗಳು ಮತ್ತು ರಥದ ಪೀಠಗಳು ಇರುವುದು ಕೆಳಭಾಗ. ಇದಕ್ಕೆ ರಥವನ್ನು ಎಳೆಯಲು ಬೇಕಾದ ಮಿಣೆಗಳನ್ನು ಕಟ್ಟುವುದು, ಗಾಲಿಗಳನ್ನು ಮರದಿಂದಲೇ ಮಾಡಿರುವುದು ಹೆಚ್ಚು. ಇದು ಸಾಕಷ್ಟು ದಪ್ಪವಾಗಿರುತ್ತದೆ. ದುಂಡಾಕಾರವಾಗಿದ್ದರೂ ಎತ್ತಿನಗಾಡಿಯ ಚಕ್ರಗಳಿರುವಂತೆ ತೇರಿನ ಗಾಲಿಗಳಿಗೆ ಅರಗಗಳಿರುವುದಿಲ್ಲ. ನಡುವೆ ಸಂದು ಇರದಂತೆ ಒಟ್ಟಿಗೆ ದುಂಡು ಹಲಗೆ ಜೋಡಿಸಿರುತ್ತಾರೆ.

ರಥವು ಭಾರತೀಯ ಪುರಾಣ ಪರಂಪರೆಗೆ ಸೇರಿದ ದೇವರುಗಳನ್ನೋ, ಪ್ರಾಣಿ ಪಕ್ಷಿಗಳನ್ನು ಬಿಡಿಸಿದ ಚಿತ್ರಗಳನ್ನು ತೇರಿನ ಹೊರಮೈಯಲ್ಲಿ ಕೆತ್ತಿರುತ್ತಾರೆ. ಈ ಕೆತ್ತನೆ ಕೆಲಸದ

ಸೂಕ್ಷ್ಮ ಕಲೆ ಕೆತ್ತಿದವರ ಹಾಗೂ ಕೆತ್ತಿಸಿದವರ ಶಕ್ತಿಯನ್ನು ಅವಲಂಬಿಸಿರುತ್ತದೆ. ಬಳ್ಳಿಗಳನ್ನು ಬಿಡಿಸಿರುವುದುಂಟು. ಇದು ಕೆಳಭಾಗವಾದರೆ ಎರಡನೆಯ ಭಾಗದಲ್ಲಿ ಅಂದ ಚಂದದ ಅಂತಸ್ತುಗಳನ್ನು ಗೋಪುರಾಕಾರದಲ್ಲಿ ಕಟ್ಟುವುದು. ಇದು ವಿಜನನಗರದ ಶೈಲಿಯ ದೇವಸ್ಥಾನಗಳ ಮುಂದಿರುವ ಎತ್ತರದ ಗೋಪುರಗಳನ್ನು ಹೋಲುತ್ತದೆ. ಅಂತೆಯೇ ರಥೋತ್ಸವ ಪದ್ಧತಿಯು ಈ ಕಾಲದಿಂದಲೇ ಆರಂಭವಾಗಿರಬೇಕು. ಅಂತೆಯೇ ಈ ರಥದ ಭಾಗವನ್ನು ಬಿದಿರು ಬೊಂಬುಗಳಿಂದ ಕಟ್ಟಿಗೆಯ ತೀರುಗಳಿಂದ ಕಟ್ಟುತ್ತಾ ಮೇಲು ಮೇಲಕ್ಕೆ ಹೋಗುತ್ತಾ ಸುತ್ತಳತೆ ಚಿಕ್ಕದಾಗುತ್ತಾ ಬರುವಂತೆ ಕಟ್ಟುತ್ತಾರೆ. ಪುಟ್ಟ ಕೊಠಡಿಗಳಿರುವಂತೆ ಒಂದೊಂದು ಅಂತಸ್ಥಿನಲ್ಲಿ ಮೇಲೇರುವ ಕ್ರಮದಲ್ಲಿ ೧೦, ೬, ೩ ಜನರು ಕೂಡುವಂತೆ ನಿಲ್ಲಲು ಅನುಕೂಲವಾಗುವಂತೆ ಭದ್ರವಾಗಿ ಭವ್ಯವಾಗಿ ಕಟ್ಟುತ್ತಾರೆ. ಅದರ ಸುತ್ತ ಸೌಂದರ್ಯ ವರ್ಧನೆಗಾಗಿ ಬಣ್ಣದ ಬಟ್ಟೆ ಮತ್ತು ಬಾವುಟಗಳನ್ನು ಕಟ್ಟುತ್ತಾರೆ. ಎಲ್ಲಾ ಕಾರ್ಯಚಟುವಟಿಕೆಗಳ ನಿರ್ವಹಣೆಯನ್ನು ಊರಿನ ಪ್ರತಿಯೊಂದು ಸಮುದಾಯದವರು ನಿರ್ವಹಿಸಿಕೊಂಡು ಬರುತ್ತಾರೆ.

ರಥವನ್ನು ನಿರ್ಮಿಸುವ ಕೆಲಸವನ್ನು ವಿಶ್ವಕರ್ಮ ಸಮಾಜದವರು ವಹಿಸಿಕೊಂಡಿರುತ್ತಾರೆ. ನಾಯಕ ಸಮಾಜದವರು ರಥ ಕಟ್ಟುವ ಕೆಲಸದಲ್ಲಿ ಸಹಾಯಕರಾಗಿ ಭಾರವಾದ ರಥದ ವಸ್ತುಗಳನ್ನು ಹೊತ್ತೊಯ್ದು ಅವರ ಕೈಯಲ್ಲಿ ಕೊಡುವುದರ ಜೊತೆಗೆ ರಥ ಕಟ್ಟುವ ಕೆಲಸಕ್ಕೆ ಸಹಾಯ ಮಾಡುತ್ತಾರೆ. ಪರಿಶಿಷ್ಟ ಜನಾಂಗದ ಜನರು ಗ್ರಾಮದ ಪ್ರತಿಯೊಂದು ಮನೆಮನೆಗೂ ಹೋಗಿ ಎಣ್ಣೆಯನ್ನು ತೆಗೆದುಕೊಂಡು ಬಂದು ರಥದ ಚಕ್ರಗಳಿಗೆ ಜೋಡಿಸಿ ಎಣ್ಣೆ ಎರೆಯುತ್ತಾರೆ.

ಬಾರಿಕ (ಗಂಗ ಮತಸ್ಥರು) ಸಮುದಾಯದವರು ರಥೋತ್ಸವದ ಗಡ್ಡೆಯು ಬಯಲಲ್ಲಿಯೇ ಇರುವುದರಿಂದ ಅದರ ಕಟ್ಟಿಗೆ ಗಾಳಿ, ಬಿಸಿಲು, ಮಳೆ, ಮಣ್ಣಿಗೆ ಸಿಲುಕಿ ಹಾಳಾಗಬಾರದೆಂದು ಅದಕ್ಕೆ ಎಣ್ಣೆ ಲೇಪನ ಮಾಡುತ್ತಾರೆ. ವಿಶ್ವಕರ್ಮ ಜನಾಂಗದವರ ಮನೆಯಿಂದ ಗ್ರಾಮದ ಸಮಸ್ಥ ದೈವದವರು, ಸುಮಂಗಲಿಯರು ಮಂಗಲವಾದ್ಯಗಳ ಮುಖಾಂತರ ಕಲಶವನ್ನು ತಂದು ರಥೋತ್ಸವದ ಕಲಶರೋಹಣ ಮಾಡಿದರೆ, ವೀರಶೈವ ಸಮಾಜದವರು ಒಂದು ಹೂವಿನಹಾರ ಹಾಲ ಮತಸ್ಥರು (ಕುರುಬ) ಒಂದು ಹಾರ, ಸಜ್ಜನರು (ಗಾಣಿಗ) ಮನೆತನದವರು ಒಂದು ಹಾರ, ಸಾಧು ಲಿಂಗಾಯ್ತ (ವೀರಶೈವ) ಒಂದು ಹಾರ ಹೀಗೆ ನಾಲ್ಕು ದೊಡ್ಡ ಹಾರಗಳನ್ನು ಮೆರವಣಿಗೆಯ ಮುಖಾಂತರ ತಂದು, ರಥದ ನಾಲ್ಕು ದಿಕ್ಕುಗಳಿಗೆ ಭಕ್ತಿಯ ಸಂಕೇತವಾಗಿ, ಸಮಾನತೆಯ ಭಾವನೆಯಿಂದ ಕಟ್ಟುವುದರ ಮೂಲಕ ರಥವನ್ನು ಅಲಂಕರಿಸುತ್ತಾರೆ. ಇನ್ನು ಕೃಷಿಕರು ತಮ್ಮ ತೋಟದಲ್ಲಿ ಅತ್ಯಂತ ಪೌಷ್ಟಿಕವಾಗಿ ಬೆಳೆದ ಗೊನೆಯನ್ನು ಹೊಂದಿರುವ ಬಾಳೆ ಗಿಡವನ್ನು ತೆಂಗಿನಕಾಯಿ ತೊಟ್ಟಿಗಳನ್ನು ತಂದು ರಥಕ್ಕೆ ಕಟ್ಟುತ್ತಾರೆ. ರಥದ ಬೀದಿಯನ್ನು ಶುಚಿಗೊಳಿಸುವ ಅಥವಾ ಮಡಿಗೊಳಿಸುವ ಸಲುವಾಗಿ ಊರಿನ ಸುಮಂಗಲಿಯರು, ಬಾಲೆಯರು, ಹರಕೆ ಹೊತ್ತ ಪುರುಷರು ಕೂಡ ನೀರಿನ ಕೊಡವನ್ನು ಹೊತ್ತು ತಂದು ನೀರನ್ನು ಹಾಕುತ್ತಾರೆ. ಇಲ್ಲಿ ರಥದ ಬೀದಿಯನ್ನು ಶುಚಿಗೊಳಿಸುವುದಷ್ಟೇ ಅಲ್ಲ, ಅಲ್ಲಿ ಧೂಳಿನಿಂದ ನೆರೆದ ಜನರಿಗೆ ತೊಂದರೆಯಾಗಬಾರದೆಂಬ ಭಾವನೆಯು ಆ

ಜನರದ್ದಾಗಿರಬಹುದು. ರಥವು ಸಾಗುವುದಕ್ಕೆ ಮುನ್ನ ಸುರಕ್ಷಿತವಾಗಿ ರಥೋತ್ಸವು ಜರುಗಲಿ ಎಂಬ ಸದುದ್ದೇಶದಿಂದ ದೈವದವರು ನಿಗಧಿಗೊಳಿಸಿದ ಮನೆಯಿಂದ ಯುವಕರು ಉತ್ಸಾಹಿಗಳಾಗಿ ವೀರ ಕೇಕೆ ಹಾಕುತ್ತಾ ಬಲಿದಾನವನ್ನು ತಂದು ಹಾಕಿದರೆ, ರಥೋತ್ಸವದ ಪೂಜೆಯ ಸಂದರ್ಭದಲ್ಲಿ ಅತ್ಯಂತ ಭಾರವಾದ ರಥವು ಯಾವುದೇ ಸಮಯದಲ್ಲಿ ಸುರಕ್ಷಿತವಾಗಿ ಚಲಿಸಲಿ ಎಂಬ ಕೈಂಕರ್ಯ ಭಾವದಿಂದ ಶಕ್ತಿಯುತವಾದ ದುರ್ಗಾದೇವಿಯ ಮೂರ್ತಿಯನ್ನು ಗೌರವ ಸಮರ್ಪಣ ಭಾವದಿಂದ, ಸೀರೆ, ಕುಪ್ಪಸ, ಹಾರ, ತುರಾಯ, ಸ್ತ್ರೀಯರು ಸೌಂದರ್ಯ ಸೂಚಕವಾದ ಬಳೆ, ಮಾಂಗಲ್ಯ, ಮುಂತಾದ ಸುಮಂಗಲತನಾದ ವಸ್ತುಗಳನ್ನು ಕೊಟ್ಟು ಪೂಜಿಸಿ ವಿನಯದಿಂದ ಬೇಡಿಕೊಳ್ಳುವುದು ಉಂಟು.

ದುರ್ಗಿಯ ಪೂಜೆಯನ್ನು ಧರ್ಮ ಪರಂಪರೆಯಲ್ಲಿ ಮಾಡುವುದನ್ನು ಅವಲೋಕಿಸಿದರೆ ಸ್ತ್ರೀಗೌರವದ ಮುಖಾಂತರ ನಮ್ಮ ಹಿರಿಯರು ಧಾರ್ಮಿಕವಾಗಿಯೂ ನಾವೆಲ್ಲರೂ ಒಂದು ಎಂದು ಸಾರಿ ಹೇಳಿದಂತಿದೆ. ಪೂಜಿಸಿ ವಿನಯದಿಂದ ಬೇಡಿಕೊಳ್ಳುವುದು ಸಂಪ್ರದಾಯ. ದುರ್ಗಿಯ ಪೂಜೆಯನ್ನು ಧರ್ಮ ಪರಂಪರೆಯಲ್ಲಿ ಮಾಡುವುದನ್ನು ಅವಲೋಕಿಸಿದರೆ ಸ್ತ್ರೀ ಗೌರವದ ಮುಖಾಂತರ ನಮ್ಮ ಹಿರಿಯರು ಸ್ತ್ರೀ–ಪುರುಷ, ಮೇಲು–ಕೀಳು ಎನ್ನುವ ಭಾವನೆಯನ್ನು ಹೊಡೆದು ಹಾಕುತ್ತಾರೆ. ದಾರ್ಶನಿಕವಾಗಿ ಸಕ್ರಿಯವಾಗಿ ರಥೋತ್ಸವದಲ್ಲಿ ಪಾಲುಗೊಳ್ಳುತ್ತಾರೆ. ದುರ್ಗಾದೇವಿಯ ದೇವಸ್ಥಾನದಿಂದ ದೇವಿಯ ಮೂರ್ತಿಯನ್ನು ಅಲಂಕಾರ ಮಾಡಿ ಪಲ್ಲಕ್ಕಿಯಲ್ಲಿ ಇಟ್ಟುಕೊಂಡು ಮಂಗಲ ವಾದ್ಯಗಳಿಂದ ಕಲಶವನ್ನು ತೆಗೆದುಕೊಂಡು ವಿಜೃಂಭಣೆಯಿಂದ ಮೆರವಣಿಗೆಯ ಮುಖಾಂತರ ಆಂಜನೇಯನ ರಥದ ಹತ್ತಿರ ಕರೆತಂದು ಪರಿಶಿಷ್ಟ ಜನಾಂಗದ ದುರ್ಗಾದೇವಿಯ ಸೇವೆಗೆಂದು ನಿಯಮಿಸಿದ ಮುದ್ರೆಯೊತ್ತಿಕೊಂಡ ಸ್ತ್ರೀಯರಿಂದ ರಥವನ್ನು ಪೂಜೆ ಮಾಡಿಸಿ ಅವರಿಂದ ಕಲಶವನ್ನು ಬೆಳಗಿಸಿ ರಥವು ಚಲಿಸುವುದಕ್ಕೆ ಚಾಲನೆ ನೀಡುವುದರ ಜೊತೆಗೆ ವರ್ಣ–ಬೇದವನ್ನು ತೊಡೆದು ಹಾಕುವುದು ಇಲ್ಲಿಯ ಉದ್ದೇಶವೆನಿಸುತ್ತದೆ. ಸರ್ವರು ಸಮಾನರು ಎನ್ನುವ ಭಾವನೆಯನ್ನು ನಮ್ಮ ಜನಪದರು ತಳೆದಂತಿದೆ. ಹಬ್ಬ–ಹರಿದಿನ, ಜಾತ್ರೆಗಳಲ್ಲಿ ಭಕ್ತಿ ಸಾಂಕೇತಿಕವಾದ ಸಂದರ್ಭಗಳಲ್ಲಿ ಒಂದೊಂದು ಕಾರ್ಯವನ್ನು ಒಂದೊಂದು ಸಮುದಾಯವು ಗೌರವ ಪೂರ್ವಕವಾಗಿ ನಡೆಸುವಂತೆ ನಿಗಧಿಯನ್ನು ಮಾಡಿದ್ದಾರೆ ಎನಿಸುತ್ತದೆ. ಒಂದೊಂದು ಸಮುದಾಯದಲ್ಲಿಯೂ ಮೇಲು–ಕೀಳು ಎಂಬ ಭಾವನೆಯನ್ನು ಹೊಡೆದೋಡಿಸಿ ಶಾಂತಿ, ನೆಮ್ಮದಿಯತ್ತ ಜನರನ್ನು ತಿರುಗಿಸುವ ಪ್ರಯತ್ನವನ್ನು ಸಾಂಕೇತಿಕವಾಗಿ ಜನಪದರು ಮಾಡಿದಂತಿದೆ.

ಇದಾದ ನಂತರ ಆಂಜನೇಯನ ರಥವನ್ನು ಪೂಜಿಸಿ ದುರ್ಗಾದೇವಿ ಮೂರ್ತಿ ಮತ್ತು ಆಂಜನೇಯ ಸ್ವಾಮಿಯ ಮೂರ್ತಿಯ ಪಲ್ಲಕ್ಕಿಯನ್ನು ಹೊತ್ತು ರಥದ ಪ್ರದಕ್ಷಿಣೆ ಮಾಡಿ ಸ್ವಾಮಿಯು ರಥವನ್ನು ಏರುತ್ತಾನೆ. ಆಗ ಆಂಜನೇಯನ ಹೆಸರಿನಲ್ಲಿ ಒಂದು ನಿಶಾನೆಯನ್ನು ಲಿಲಾವು(ಹರಾಜು) ಮಾಡುತ್ತಾರೆ. ಅಲ್ಲಿ ನೆರೆದ ಗ್ರಾಮದ ಮತ್ತು ನೆರೆ ಹೊರೆಯ ಗ್ರಾಮದಿಂದ ಬಂದ ಭಕ್ತರೆಲ್ಲರೂ ಜಾತಿ–ಮತ, ಧರ್ಮ ಮರೆತು ತಮ್ಮ ಯೋಗ್ಯತೆಗೆ ತಕ್ಕ ಅನಿಸಿಕೆಯ

ಧರವನ್ನು ವ್ಯಕ್ತಪಡಿಸುತ್ತಾರೆ. ಅಲ್ಲಿ ಅತೀ ಹೆಚ್ಚು ಧರವು ಯಾವ ಭಕ್ತರಿಂದ ವ್ಯಕ್ತಪಟ್ಟಿರುತ್ತದೆಯೋ ಅವರ ಹೆಸರನ್ನು ಮೂರು ಬಾರಿ ಕೂಗಿ, ನೆರೆದ ದೈವದವರ ಅನುಮತಿಯನ್ನು ಪಡೆದು ಆ ನಿಶಾನೆಯನ್ನು ಭಕ್ತಿಯಿಂದ ಭಕ್ತರ ಮನೆಗೆ ತೆಗೆದುಕೊಂಡು ಹೋಗಿ ಕೊಡುವುದು ವಾಡಿಕೆ.

ಈ ನಿಶಾನೆಯನ್ನು ವರ್ಷವಿಡೀ ಪೂಜಿಸಿದರೆ ಅವರಿಗೆ ಜೀವನದಲ್ಲಿ ಶುಭ ಹಾಗೂ ಆಯುರಾರೋಗ್ಯ ಲಭಿಸುತ್ತದೆ ಎನ್ನುವ ಉದ್ಧೇಶದಿಂದ ನಂಬಿ ಅದನ್ನು ಪಡೆದು ಪೂಜಿಸುತ್ತಾರೆ. ಅಲ್ಲದೆ ರಥೋತ್ಸವವು ನಡೆಯಲು ಆರ್ಥಿಕ ವ್ಯವಸ್ಥೆಯು ಅನಿವಾರ್ಯ. ಆರ್ಥಿಕ ವ್ಯವಸ್ಥೆಗೆ ಇದು ನೆರವಾಗುತ್ತದೆ. ಈ ವರ್ಷ ನಿಶಾನೆಯನ್ನು ಲಿಲಾವು ತೆಗೆದುಕೊಂಡ ಭಕ್ತರು ಮುಂದಿನ ವರ್ಷ ರಥೋತ್ಸವದ ದಿನ ದೈವದ ಸಮ್ಮುಖದಲ್ಲಿ ರಥೋತ್ಸವ ಸಮಯದಲ್ಲಿ ತಮ್ಮ ಭಕ್ತಿ ಸಮರ್ಪಣೆ ಮಾಡುವುದು ರೂಢಿ. ಹಾಗು ಖಡ್ಡಾಯ. ಇಷ್ಟಾದ ಮೇಲೆ ರಥವು ಚಲಿಸಲು ನೆರೆದ ಭಕ್ತರಿಗೆ ಒಪ್ಪಿಗೆಯನ್ನು ಹಿರಿಯರು ಸಮ್ಮತಿಸಿದಾಗ ನೆರೆದ ಭಕ್ತರೆಲ್ಲರು ಚಕ್ರಗಳಿಗೆ ತೆಂಗಿನ ಕಾಯಿ ಹೊಡೆಯುತ್ತಾರೆ. ಹಾಗೂ ಬಾಳೆ ಹಣ್ಣುಗಳನ್ನು ತೇರಿನ ಕಳಸಕ್ಕೆ ಮುಟ್ಟುವಂತೆ ಎಸೆಯುತ್ತಾರೆ. ಆಗ ರಥದ ಸೊಬಗು, ಅದರ ಗಾಂಭೀರ್ಯ, ಸುಮಂಗಲಿಯರ ಭಕ್ತಿಯ ಹಾಗೂ ಅಹ್ಲಾದಕರವಾದ ನೋಟ, ಯುವಕರ, ಗೆಳೆಯರ ಪ್ರೀತಿಯ ಒಟನಾಟ, ಬಲಶಾಲಿಗಳ ಶಕ್ತಿ ಪ್ರದರ್ಶನದಿಂದ ಆ ತೇರಿಗೆ ಸನ್ನೆಗಳನ್ನು ಹಾಕುವುದು, ನೋಡಲು ಮನಮೋಹಕವಾಗಿದ್ದರೂ ಅಲ್ಲಿ ತೇರನ್ನು ಎಳೆಯುವುದು, ಸನ್ನೆ ಹಾಕುವುದು ತಮ್ಮ ತಮ್ಮ ಪರಾಕ್ರಮದ ಪ್ರದರ್ಶನದ ದ್ಯೋತಕವು ಆಗಿರುತ್ತದೆ. ಹೀಗೆ ಆಂಜನೇಯನ ರಥೋತ್ಸವು ಸುಲಲಿತವಾಗಿ ಕೋಗಳಿಯಲ್ಲಿ ಜರುಗುತ್ತದೆ.

**ಕುಂಕುಮ ಪೂಜೆ ಹಾಗೂ ಎಲೆ ಪೂಜೆ ಮಾಡುವುದು**

ಚಂದ್ರಮಾನ ಯುಗಾದಿಯ ಬಿದಿಗಿಯ ದಿನದಂದು ಊರಿನಲ್ಲಿ ಯಾರಾದರೂ ಹರಕೆ ಹೊತ್ತು ಕೊಂಡವರು ಕುಂಕುಮ ಪೂಜೆಯನ್ನು ಮಾಡಿಸುತ್ತಾರೆ. ಯಾರೂ ಭಕ್ತಾದಿಗಳು ಕುಂಕುಮ ಪೂಜೆ ಮಾಡಿಸದಿದ್ದರೆ ಆಂಜನೇಯ ಸ್ವಾಮಿಯ ಕಮಿಟಿಯವರೇ ಖರ್ಚನ್ನು ವ್ಯಯಿಸಿ ಕುಂಕುಮ ಪೂಜೆಯು ನೆರವೇರುವಂತೆ ಮಾಡುತ್ತಾರೆ. ಆಂಜನೇಯ ಸ್ವಾಮಿಯು ಮೂರ್ತಿಗೆ ಕುಂಕುಮದಿಂದ ಅಲಂಕರಿಸಿ, ಬೆಳ್ಳಿ ಚಿನ್ನದ ಆಭರಣಗಳನ್ನು ತೊಡಿಸಿ, ಹೂವಿನ ಹಾರವನ್ನು ಹಾಕಿ ಸುಂದರವಾಗಿ ಶೃಂಗಾರ ಮಾಡುತ್ತಾರೆ. ಊರಿನ ಭಕ್ತರೆಲ್ಲರೂ ಕುಂಕುಮ ಪೂಜೆಯಲ್ಲಿ ಅಲಂಕೃತನಾದ ಆಂಜನೇಯ ಸ್ವಾಮಿಯ ದರುಶನಕ್ಕೆ ಉಲುಪಿಯನ್ನು ಅಂದರೆ ಅಡಿಕೆ-ಎಲೆ, ತೆಂಗಿನಕಾಯಿ, ಅಕ್ಕಿ, ಬೆಲ್ಲ, ಗೋದಿ ಹಿಟ್ಟು, ಬೇಳೆಯನ್ನು ತೆಗೆದುಕೊಂಡು ಬಂದು ಸ್ವಾಮಿಗೆ ಅರ್ಪಿಸಿ ದರ್ಶನವನ್ನು ಮಾಡುತ್ತಾರೆ. ನಂತರ ಪೂಜೆಯನ್ನು ಚೌತಿಯ ದಿನ ಇಳಿಸುತ್ತಾರೆ. ಕುಂಕುಮ ಪೂಜೆಯನ್ನು ಇಳಿಸುವಾಗ ದೇವರ ಮೈಗೆ ಮೆತ್ತಿದ ಕುಂಕುಮವನ್ನು ಗ್ರಾಮದ ದೈವದವರಿಗೆಲ್ಲ ವಿತರಿಸಲಾಗುತ್ತದೆ. ಮತ್ತು ಊರಿನ ಎಲ್ಲಾ ಸುಮಂಗಲಿಯರು ಆಂಜನೇಯನ ಕುಂಕುಮವನ್ನು ಹಣೆಗೆ ಹಚ್ಚಿ ಕೊಂಡರೆ ತಮ್ಮ ಮಾಂಗಲ್ಯ ಗಟ್ಟಿಗೊಂಡು ದೀರ್ಘ ಸುಮಂಗಲಿಯರಾಗುತ್ತೇವೆ ಎಂಬ ನಂಬಿಕೆ ಅವರದು. ಆ ಕಾರಣಕ್ಕಾಗಿ ಆಂಜನೇಯನ ಕುಂಕುಮವನ್ನು ತೆಗೆದುಕೊಂಡು ಹೋಗಿ ವರ್ಷವಿಡೀ ಉಪಯೋಗಿಸುವುದಕ್ಕಾಗಿ ತಮ್ಮ

ಮನೆಯಲ್ಲಿರುವ ಕುಂಕುಮದೊಂದಿಗೆ ಸೇರಿಸಿಕೊಂಡು, ವರ್ಷಕ್ಕೆ ಆಗುವಷ್ಟು ಹೆಚ್ಚವಳಿ ಮಾಡಿಕೊಂಡು ಹಣೆಗೆ ಹಚ್ಚಿಕೊಳ್ಳುವುದು ವಾಡಿಕೆಯಾಗಿದೆ.

**ಎಲೆ ಪೂಜೆ**

ಚೌತಿಯ ದಿನದಂದು ಮುಳ್ಳುಗದ್ದುಗೆಯ ಸಂಪ್ರದಾಯವಿರುತ್ತದೆ. ಉದಯದಿಂದ ಮಧ್ಯಾಹ್ನದವರೆಗೂ ಸಮಸ್ಥ ಭಕ್ತರು ಸೇರಿಕೊಂಡು ಆಂಜನೇಯ ಸ್ವಾಮಿಯ ಅಭಿಷೇಕ, ಪೂಜಾಲಂಕಾರ, ಪಂಚಾಮೃತಭಿಷೇಕ, ಹೂವಿನ ಅಲಂಕಾರ ವಿವಿಧ ರೀತಿಯ ಪೂಜೆಗಳನ್ನು ಮಾಡುತ್ತಾರೆ. ಇವುಗಳ ಜೊತೆಗೆ ಎಲೆ ಪೂಜೆ ಕಟ್ಟಿಸುವುದು ರೂಢಿ. ಈ ಪೂಜೆಯನ್ನು ಗ್ರಾಮದ ಎಲೆಬಳ್ಳಿ ತೋಟವಿರುವ ಯಾವುದಾದರೂ ಒಬ್ಬ ರೈತರು ಕಟ್ಟಿಸುತ್ತಾರೆ. ಎಲೆ ಪೂಜೆ ಕಟ್ಟುವುದಕ್ಕೆ ೧೫ರಿಂದ ೨೦ ಚೆಟ್ಟಿ ಎಲೆ ಬೇಕಾಗುತ್ತದೆ. ಹರಕೆಯನ್ನು ಹೊತ್ತ ರೈತನು ಎಲೆಯನ್ನು ಭಕ್ತಿಯಿಂದ ದೇವಸ್ಥಾನಕ್ಕೆ ತಂದು ಕೊಡುತ್ತಾನೆ. ನೂರೆಂಟು ಕಾನೆಗಳು ಎತ್ತರಕ್ಕೆ, ಮೂವತ್ತೆರಡು ಕಾನೆಗಳು ಅಗಲವಿರುವ ಬಿದಿರಿನ ಒಂದು ಚೌಕಟ್ಟನ್ನು ನಿರ್ಮಿಸಿ ಒಂದೊಂದು ಕಾನೆಗೆ ಐದೈದು ಎಲೆಯಂತೆ ಕಳಸದೊಪಾದಿಯಲ್ಲಿ ನಿರ್ಮಿಸಿ ಸ್ವಾಮಿಗೆ ಅಲಂಕರಿಸಿ ಪೂಜೆ ಮಾಡುತ್ತಾರೆ. ಬಿದಿರಿನ ಚೌಕಟ್ಟಿನ ತುದಿಗೆ ಐದು ಕಳಶದ ರೂಪದಲ್ಲಿ ಹದಿನಾರು ಎಲೆಗಳನ್ನು ಜೋಡಿಸಿರುತ್ತಾರೆ. ಪೂಜೆಯನ್ನು ಮಾಡಿಸಿದವರು ಪದ್ಧತಿಯಂತೆ ದೇವರಿಗೆ ಎಲ್ಲಾ ಪೂಜಾ ಸಾಮಗ್ರಿಗಳನ್ನು ತಂದುಕೊಟ್ಟು ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ. ನಂತರದ ದಿನ ಪೂಜೆಯನ್ನು ಇಳಿಸಿದಾಗ ತುದಿಯಲ್ಲಿರುವ ಐದು ಕಳಸದ ಎಲೆಯನ್ನು ಒಂದು ಅರ್ಚಕರಿಗೆ, ಒಂದು ಪೂಜೆ ಮಾಡಿಸಿದವರಿಗೆ, ಒಂದು ಎಲೆ ಚೌಕಟ್ಟನ್ನು ನಿರ್ಮಿಸಿದ ವಿಶ್ವಕರ್ಮರಿಗೆ, ಒಂದು ನಾಯಕ ಸಮೂದಾಯದ ಹಿರಿಯರಿಗೆ ಕೊನೆಯದು ಗ್ರಾಮದ ಮತಮಾನ್ಯಗಳಿಗೆ ವಿತರಿಸುತ್ತಾರೆ. ೩೨ ಕಾನಿಗಳಲ್ಲಿ ಒಂದೊಂದು ಸಾಲಿನಲ್ಲಿ ಬರುವ ಎಲೆಗಳನ್ನು ಗ್ರಾಮದ ಪ್ರತಿಯೊಂದು ಜನಾಂಗದವರಿಗೂ ಕೊಟ್ಟು ಗೌರವಿಸುವುದರ ಜೊತೆಗೆ ನಾವೆಲ್ಲರೂ ಒಂದೇ ಎನ್ನುವ ವಿಶ್ವಾಸವನ್ನು ವ್ಯಕ್ತಪಡಿಸುತ್ತಾರೆ.

**ಮುಳ್ಳುಗದ್ದುಗೆ**

ಎಲೆ ಪೂಜೆಯನ್ನು ಇಳಿಸಿ ಎಲೆಗಳನ್ನು ಹಂಚಿಕೊಂಡ ನಂತರ ಶಂಕು ಮತ್ತು ಚಕ್ರದ ದಾಸಮುದ್ರೆಯನ್ನು ಹೊತ್ತ ದಾಸರು ಶುಚಿತ್ವರಾಗಿ ನಿರಾಹಾರದಿಂದ, ಭಕ್ತಿಯಿಂದ ಸಾಯಂಕಾಲ ಮುಳ್ಳುಪವಾಡದ ಕ್ರಿಯೆಯನ್ನು ನೆರವೇರಿಸುವುದಕ್ಕೆ ಮುಳ್ಳುಗದ್ದುಗೆಯನ್ನು ನಿರ್ಮಿಸಲು ಮುಂದಾಗುತ್ತಾರೆ. ಗದ್ದುಗೆಯನ್ನು ನಿರ್ಮಿಸಲು ಹಗರಿಬೊಮ್ಮನಹಳ್ಳಿ ತಾಲೂಕಿನ ಬೆಣಕಲ್ಲಿನ ಬಳಿ ಇರುವ ದೊಡ್ಡಗಟ್ಟಿ ಅಡವಿಗೆ ಹೋಗಿ ಗಂಡುಗಾರಿ ಮುಳ್ಳನ್ನು ತರುತ್ತಾರೆ. ಮುಳ್ಳು ಗದ್ದುಗೆ ಎಂದು ನಿರ್ಮಿಸಿದ ಬಿದಿರಿನ ಚೌಕಿನಲ್ಲಿ ಕಾರಿ ಮುಳ್ಳನ್ನು ಮೇಲ್ಮುಖವಾಗಿ ಸಮಾನವಾಗಿ ಹೊಂದಿಸಿ ವಿಶ್ವಕರ್ಮ ಜನಾಂಗದವರು ತಯಾರಿಸುತ್ತಾರೆ. ಬಿದಿರಿನ ಚೌಕು, ಮಳೆ, ಗಾಳಿ ಬಿಸಿಲಿಗೆ ಬಹಳ ದಿನಗಳ ಕಾಲ ಉಳಿಯುವುದಿಲ್ಲವೆಂದು ಇತ್ತೀಚೆಗೆ ಕಬ್ಬಿಣದ ಗದ್ದುಗೆಯನ್ನು ತಯಾರಿಸಿದ್ದಾರೆ.

ಗ್ರಾಮದ ಸರ್ವ ಮತೀಯರ ಪ್ರೀತಿ ಗೌರವಾರ್ಥವಾಗಿ ನಡೆಯುವ ಮುಳ್ಳು ಪವಾಡಕ್ಕೂ ಮುನ್ನ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿರುವ ದಿಬ್ಬದ ಹಳ್ಳಿಯ ಸಮೀಪ ಇರುವ ಬಯಲು ಹನುಮಂತನ ಪೂಜೆಯನ್ನು ಮಾಡಿಕೊಂಡು ಬರುತ್ತಾರೆ

**ಬೇಟೆ ಗಿಡ ತರುವುದು**

ಕೋಗಳಿಯ ಪಶ್ಚಿಮ ದಿಕ್ಕಿನಲ್ಲಿರುವ ಹಗರಿ ಹಳ್ಳದ ಸುತ್ತ ಮುತ್ತ ಕಾರಿ ಮುಳ್ಳಿನ ಗಿಡವನ್ನು ಆಯಗಾರ ಮನೆತನದವರು ಹುಡುಕಿ ಇಟ್ಟಿರುತ್ತಾರೆ. ಅದಕ್ಕೆ ಮೂರು ನಾಲ್ಕು ದಿನಗಳಿಂದ ಗಿಡದ ಸುತ್ತಲೂ ಅಗೆದು ನೀರನ್ನು ಉಣಿಸಿರುತ್ತಾರೆ. ಮುಳ್ಳುಪವಾಡದ ದಿನ ಬಯಲು ಆಂಜನೇಯನಿಗೆ ಸಕಲ ವಾದ್ಯಗಳೊಂದಿಗೆ ಕಳಶವನ್ನು ಸ್ಥಿರಮುತ್ತೈದೆಯರು ತೆಗೆದುಕೊಂಡು ಕೋಗಳಿ ಆಂಜನೇಯನನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಹೋಗಿ ಪೂಜೆಯನ್ನು ಮಾಡಿಕೊಂಡು ಬರುತ್ತಾರೆ. ಬರುವಾಗಿ ದಿಬ್ಬದ ಹಳ್ಳಿಯ ಜನರು ಆಂಜನೇಯನಿಗೆ ಎಡೆಯನ್ನು ಅರ್ಪಿಸಿ ಪೂಜೆ ಮಾಡಿ ಕೈಮುಗಿದು ಕಳಿಸಿಕೊಡುತ್ತಾರೆ. ಅಲ್ಲಿಯ ತನಕ ದಿಬ್ಬದ ಹಳ್ಳಿಯ ಜನರು ಯಾರು ಕೂಡ ಊಟವನ್ನು ಮಾಡದೇ ನೈವೇದ್ಯವನ್ನು ಸ್ವಾಮಿಗೆ ಅರ್ಪಿಸುವ ಸಲುವಾಗಿ ಕಾಯುತ್ತಿರುತ್ತಾರೆ. ಹೀಗೆ ಪೂಜೆ ಮಾಡಿ ಕಳಿಸಿಕೊಟ್ಟ ಮೇಲೆ ಬರುವಾಗ ಹಗರಿ ಹಳ್ಳದಲ್ಲಿ ಗಂಗೆಯ ಪೂಜೆಯನ್ನು ಮಾಡಿಕೊಂಡು, ತುಂಬಿದ ಕೊಡವನ್ನು ಅರ್ಚಕನಿಗೆ ಹೊರಿಸಿಕೊಂಡು ಕಾರಿಗಿಡವನ್ನು ಬೇರು ಸಮೇತ ಕಿತ್ತು ಅದನ್ನು ಮುದ್ರೆಯೊತ್ತ ದಾಸರು ಹೊತ್ತು ಕೊಂಡು ಕೋಗಳಿಗೆ ಬರುತ್ತಾರೆ. ಬರುವ ದಾರಿಯನ್ನು ಕಾಯುತ್ತಾ ಕುಳಿತ ಊರಿನ ದೈವಸ್ಥರು, ಗ್ರಾಮಸ್ಥರು ಸ್ವಾಮಿಯನ್ನು ಪೂಜಿಸಿ ಎದುರುಗೊಂಡು ಬಂದು ಆಂಜನೇಯನ ದೇವಸ್ಥಾನವನ್ನು ಐದು ಬಾರಿ ಸುತ್ತುವರಿದು ಮುಳ್ಳುಗದ್ದುಗೆಗಾಗಿ ಸಿದ್ಧವಾಗಿರುವ ಪಾದಗಟ್ಟೆಗೆಯಲ್ಲಿ ಸ್ವಾಮಿಯನ್ನು ಕರೆತರುತ್ತಾರೆ. ಈ ಬೇಟೆಗಿಡವನ್ನು ಹೊತ್ತ ಯುವಕರು ಆ ಕಡೆ–ಈ ಕಡೆ ಓಡಾಡುತ್ತಾ ಜನರನ್ನು ಉತ್ಸವಕ್ಕೆ ಅಡ್ಡ ಬರದಂತೆ ದೂರ ಕಳಿಸುವ ಕೆಲಸವನ್ನು ಮಾಡುತ್ತಾರೆ. ದೇವತಾ ಕಾರ್ಯಕ್ಕೆ ಅಡ್ಡಿ ಪಡಿಸದಿರಲಿ ಎನ್ನುವ ಉದ್ದೇಶವಾಗಿರುತ್ತದೆ.

**ಮುಳ್ಳುಪವಾಡ**

ಯಾವುದೇ ಒಬ್ಬ ವ್ಯಕ್ತಿಗೆ ಸಾಧ್ಯವಾಗದ ಕೆಲಸ ಕಾರ್ಯಗಳನ್ನು ಮತ್ತೊಬ್ಬ ಮನುಷ್ಯನು ನಿರ್ಭಯವಾಗಿ ಸಹಜವಾದ ರೀತಿಯಲ್ಲಿ ನೆರವೇರಿಸಿ ತೋರಿಸಿದಾಗ ಅದನ್ನು ನಾವು ಕಣ್–ಕಟ್ ಅಥವಾ ಮಾಯಮಂತ್ರ, ಅಸಾಧಾರಣ ಮನುಷ್ಯ, ಅಥವಾ ಪವಾಡ ಪುರುಷ ಎಂದು ಕರೆಯುತ್ತೇವೆ. ಈ ಕೆಲಸ ಚಿಕ್ಕದಾಗಿರಬಹುದು, ದೊಡ್ಡದಾಗಿರಬಹುದು, ಉದಾ: ವೀರಭದ್ರೇಶ್ವರ ದೇವರ ಭಕ್ತರು ಆ ದೇವರ ಮುಂದೆ ಮಂತ್ರ ಮುಗ್ಧರಾಗಿ ಆವೇಶ ಭರಿತರಾಗಿ ಕಡೇ ಕಡೇ ರುದ್ರ ಎಂದು ಒಡಪುಗಳನ್ನು ಹೇಳುತ್ತಾ ನಾಲಿಗೆ, ತುಟಿ, ಗಲ್ಲ, ಮುಂಗೈನ ಚರ್ಮಕ್ಕೆ ಶಸ್ತ್ರವನ್ನು ಚುಚ್ಚಿ (ತೂರಿಸಿಕೊಂಡು) ನೂರೊಂದು ಗಂಟು ಹಾಕಿದ ದಾರವನ್ನು ದಾಟಿಸುವುದು, ವಾದ್ಯಗಳ ಗತ್ತಿಗೆ ತಕ್ಕಂತೆ ಭಾವಾವೇಶದಿಂದ ಕುಣಿಯುವುದು. ದುರುಮುರುಗಿಯವರು ಚಾಟಿಯಿಂದ ಮೈಗೆ ಹೊಡೆದುಕೊಂಡು ಮೈಯನ್ನು ಗಾಯಗೊಳಿಸಿಕೊಳ್ಳುವುದು, ಸರ್ಕಸ್ಸಿನ ಹುಡುಗಿಯರು ಹಗ್ಗದ

ಮೇಲೆ ನಡೆಯುವುದು, ಮತ್ತು ಮಕ್ಕಳ ಹೊಟ್ಟೆಯ ಮೇಲೆ ಕಲ್ಲುಬಂಡೆಯನ್ನು ಹೊಡೆದು ತುಂಡು ಮಾಡುವುದು, ಮೈಲಾರ ಲಿಂಗನ ಭಕ್ತರು ಮುಖಕ್ಕೆ ಬಂಢಾರ ಲೇಪಿಸಿಕೊಂಡು ಭಕ್ತಿಯ ಆವೇಶದಲ್ಲಿ ಮೈಮರೆತು ಕಾಲಿಗೆ ಮಳೆ ಹೊಡೆದುಕೊಳ್ಳುವುದು, ಹುಲಿಗೆಮ್ಮ, ಎಲ್ಲಮ್ಮನ ಜೋಗುತಿಯರು ನೀರಿನ ಕೊಡವನ್ನು ತಲೆಯ ಮೇಲೆ ಇಟ್ಟುಕೊಂಡು ಕುಣಿದರೂ ಬೀಳದಂತೆ ನೋಡಿಕೊಳ್ಳುವುದು, ಹೊಸೂರಮ್ಮ ದೇವಸ್ಥಾನದಲ್ಲಿ ಅರ್ಚಕನು ಕುದಿಯುವ ಪಾಯಸದ ಹಂಡೆಯಲ್ಲಿ ಕೈಯಿಟ್ಟು ಪಾಯಸ ತಿರಿಗಿಸುವುದು, ಅಗ್ನಿ ಹೊಂಡ ಹಾರುವುದು, ಈ ಮುಂತಾದ ಎಲ್ಲಾ ಅಸಾಧ್ಯವಾದ ಕೆಲಸಗಳನ್ನು ಸಾಧ್ಯವಾಗಿಸಿ ತೋರಿಸುವುದರ ಮೂಲಕ ಆಶ್ಚರ್ಯಕರವಾದ ಪವಾಡಗಳನ್ನು ನಡೆಯಿಸುತ್ತಾರೆ.

ಈ ಹಿನ್ನೆಲೆಯಲ್ಲಿ ಯಾವುದೇ ಜನಪದ ದೈವಗಳು ಪ್ರಸಿದ್ಧಿಯನ್ನು ಪಡೆದಿರುವುದು ಅಲ್ಲಿ ನಡೆದುಕೊಂಡು ಬಂದ ವಿಶಿಷ್ಟವಾದ ಪವಾಡಗಳಿಂದ. ಒಂದೊಂದು ದೈವಕ್ಕೂ ಒಂದೊಂದು ರೀತಿಯ ಪವಾಡಗಳನ್ನು ಮಾಡುವುದನ್ನು ಹಬ್ಬ–ಹರಿದಿನ, ಜಾತ್ರೆಯಂತಹ ಸಂದರ್ಭದಲ್ಲಿ ನಾವು ಕಾಣುತ್ತೇವೆ. ಇಂತಹ ಪವಾಡಗಳು ವಿಶಿಷ್ಟವಾದ ಜನಪದ ಆಚರಣೆಗಳಾಗಿವೆ. ಪವಾಡ ಮಾಡುವ ವ್ಯಕ್ತಿ ಮತ್ತು ದೈವದ ನಡುವೆ ನಿಕಟವಾದ ಸಂಬಂಧವಿರುತ್ತದೆ. ಕೆಲವು ಪವಾಡಗಳು ವಂಶ ಪಾರಂಪರ್ಯವಾಗಿರುತ್ತವೆ. ಇನ್ನೂ ಕೆಲವು ಪವಾಡಗಳು ವಂಶಪಾರಂಪರ್ಯವಾಗಿರುವುದಿಲ್ಲ. ಪವಾಡದ ವ್ಯಕ್ತಿಗೆ ಆಯಾ ಊರುಗಳಲ್ಲಿ, ಸಮಾಜದಲ್ಲಿ ಪೂಜ್ಯನೀಯ ಸ್ಥಾನವಿರುತ್ತದೆ. ಜನರು ಈತನಲ್ಲಿ ದೈವವನ್ನು ಕಾಣುತ್ತಾರೆ. ದಾರಿಯಲ್ಲಿ ಎದುರಾದರೆ ಕೈಮುಗಿದು ಕಾಲಿಗೆ ಬೀಳುವುದು ವಾಡಿಕೆ.

ಕೋಗಳಿಯಲ್ಲಿ ಹನುಮಪ್ಪನ ಪವಾಡದ ಪುರುಷರು ವಂಶಪಾರಂಪರ್ಯವೇನು ಅಲ್ಲ. ಅದು ಒಬ್ಬರಿಂದೊಬ್ಬರಿಗೆ ಬದಲಾಗುತ್ತಾ ಬಂದಿದೆ. ಈ ಊರಿನಲ್ಲಿ ಇಂತಹ ಆಂಜನೆಯನ ಮುಳ್ಳಿನ ಪವಾಡದ ವ್ಯಕ್ತಿಯನ್ನು ಇಂದಿಗೂ ಜನರೆಲ್ಲರೂ ಮುಳ್ಳು ಪವಾಡದ ದಾಸಪ್ಪ ಎಂದೇ ಕರೆಯುವುದುಂಟು. ಆತನ ಅಧಿಕೃತ ಹೆಸರನ್ನೇ ಯಾರು ಕರೆದಂತೆ ಕಾಣುವುದಿಲ್ಲ. ಹಾಗೆಯೇ ಪ್ರತಿಯೊಂದು ಊರುಗಳಲ್ಲಿಯೂ ಆಂಜನೇಯನ ದೇವಾಲಯವಿದ್ದು, ಅಲ್ಲಿ ರಥೋತ್ಸವವೇನಾದರೂ ನಡೆಯುತ್ತಿದ್ದರೆ ಒಬ್ಬ ದಾಸಪ್ಪ ಅಥವಾ ಪವಾಡದ ವ್ಯಕ್ತಿ ಇದ್ದೇ ಇರುತ್ತಾನೆ. ಪವಾಡದ ದಾಸಪ್ಪ ಅಥವಾ ಪವಾಡ ಪುರುಷನೆಂದು ನಿಯಮಿಸಲ್ಪಡುವ ವ್ಯಕ್ತಿಯು ಆಂಜನೇಯನ ಭಕ್ತನಾಗಿದ್ದು, ಆ ವ್ಯಕ್ತಿ ಸಣ್ಣ ಪುಟ್ಟ ದೈವೀ ಅಂಶಗಳನ್ನು ತೋರಿಸಿ ಭಾವೋದ್ವೇಗದಿಂದ, ಭಕ್ತಿ ಪರವಶನಾಗಿ ಆಂಜನೇಯನೇ ಈತ ಎನ್ನುವ ಹಾಗೆ ಆಂಜನೇಯನಿಗೆ ಸಂಬಂಧಿಸಿದ ಹಬ್ಬ, ಜಾತ್ರೆ ಆತನ ವಾರದದಿನ ನಡೆದುಕೊಂಡಾಗ, ದೇವರು ಆತನ ಮೈಮೇಲೆ ಬರುತ್ತಿದೆ ಎನ್ನುವುದನ್ನು ಆ ಊರಿನ ಜನಪದರು ಗುರುತಿಸಿಕೊಂಡಾಗ ಆತನಲ್ಲಿ ಜನಪದರಿಗೆ ಗೌರವ ಅಥವಾ ಭಕ್ತಿ ಬೆಳೆಯುತ್ತಾ ಬಂದು, ಆ ಊರಿನ ಆಂಜನೇಯನು ದಾಸಪ್ಪನು ವೃದ್ಧನಾದ ಮೇಲೆ ಅಥವಾ ಆತನಿಂದ ಯಾವುದೇ ಪವಾಡ ಸದೃಶ ಕ್ರಿಯೆಗಳನ್ನು ನೆರವೇರಿಸಲು ಆಗದಿದ್ದಾಗ, ಅಥವಾ ಆತನು ಮರಣ ಹೊಂದಿದ ತರುವಾಯ ಮೇಲಿನ ವ್ಯಕ್ತಿಯನ್ನು ಪವಾಡದ

ದಾಸಪ್ಪನನ್ನಾಗಿ ನಿಯಮಿಸಿಕೊಂಡು ಬಂದಂತೆ ಕಾಣುತ್ತದೆ. ಹಾಗಾಗಿ ಕೋಗಳಿಯಲ್ಲಿ ಈ ಸಂಪ್ರದಾಯ ವಂಶ ಪಾರಂಪರ್ಯವಾಗಿ ಉಳಿದುಕೊಂಡು ಬಂದಿಲ್ಲ.

ಈ ಗ್ರಾಮದಲ್ಲಿ ವಿವಿಧ ರೀತಿಯ ಹಬ್ಬ ಆಚರಣೆಗಳನ್ನು ಆಚರಿಸುತ್ತಾರೆ. ಅವುಗಳಲ್ಲಿ ಯುಗಾದಿಯ ಸಂದರ್ಭದಲ್ಲಿ ಆಂಜನೇಯನಿಗೆ ಸಂಬಂಧಿಸಿದಂತೆ ಸಾಂಪ್ರದಾಯಿಕ ಆಚರಣೆಗಳು ಕೋಗಳಿಯಲ್ಲಿ ಆಚರಿಸಲ್ಪಡುತ್ತವೆ. ಆಂಜನೇಯನಿಗೆ ಸಂಬಂಧಿಸಿದ ಹಾಗೆ ಐದಾರು ದಿನಗಳವರೆಗೆ ನಡೆಯುವ ಕಾರ್ಯಕ್ರಮಗಳ, ಆಚರಣೆಗಳ ಸರ್ವ ಕಾರ್ಯಕ್ಕೂ ಪೂರ್ವ ಪೀಠಿಕೆ ಎಂಬಂತೆ ಚಂದ್ರಮಾನ ಯುಗಾದಿಯ ಪಾಢ್ಯದ ದಿನದಂದು ಕಂಕಣಧಾರಣ ಮಾಡುತ್ತಾರೆ. ಕಂಕಣ ಧಾರಣ ಮಾಡಿಕೊಂಡವರು ಎಲ್ಲಾ ದೇವತಾ ಕಾರ್ಯದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಜವಬ್ದಾರಿಯುತವಾಗಿ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ದೇವಸ್ಥಾನದಲ್ಲಿ ಹಂದರ ಹಾಕುವುದು, ಉತ್ಸವ ಮೂರ್ತಿಯ ಮೆರವಣಿಗೆ ಮಾಡುವುದು, ಓಕುಳಿ ಹೊಂಡಕ್ಕೆ ನೀರು ತುಂಬುವುದು, ಹಂದರಕ್ಕೆ ತೆಂಗಿನ ಗರಿಯ ಚಪ್ಪರ ಹಾಕಿ ತೆಂಗಿನ ಕಾಯಿಗಳನ್ನು ತೂಗು ಕಟ್ಟುವುದು, ಓಕುಳಿಯಾಡುವುದು, ಬೇಟೆಗಿಡ ತರುವುದು, ರಥೋತ್ಸವ, ಬಯಲು ಆಂಜನೇಯನ ಪೂಜೆ, ಮುಳ್ಳುಪವಾಡ, ಕಡುಬಿನ ಕಾಳಗ, ಬೇಟೆಗೆ ಹೋಗುವುದು ಇತ್ಯಾದಿ ಕಾರ್ಯಗಳು ಯುಗಾದಿ ಹಬ್ಬದಲ್ಲಿ ನಡೆಯುತ್ತವೆ.

ಈ ಎಲ್ಲಾ ಕಾರ್ಯಗಳು ಮುಗಿಯುವವರೆಗೂ ಕಂಕಣಧಾರಿಗಳು ನಿರಾಹಾರಿಗಳಾಗಿ ಕೇವಲ ದ್ರವರೂಪದ ಆಹಾರವನ್ನು ತೆಗೆದುಕೊಳ್ಳುತ್ತಾರೆ. ನಾವು ೨೧ನೆ ಶತಮಾನದೊಳಗಿದ್ದರೂ ವೈಜ್ಞಾನಿಕವಾಗಿ ಬಹಳಷ್ಟು ಮುಂದುವರೆದಿದ್ದರೂ ಕೂಡ ವೈಜ್ಞಾನಿಕ ಸತ್ಯವೆನ್ನುವ ಹಾಗಿ ಇಂತಹ ಮುಳ್ಳುಪವಾಡದಂತಹ ಆಚರಣೆಗಳು ಇಂದಿಗೂ ನಮ್ಮ ಜನಪದರಲ್ಲಿ ನಡೆಯುತ್ತವೆ. ಮನುಷ್ಯ ಮುಳ್ಳಿನ ಮೇಲೆ ಮಲಗಿ ಊರ ತುಂಬಾ ಮೆರವಣಿಗೆ ಮಾಡಿಕೊಂಡು ಮೇಲೆ ಎದ್ದರೂ ಕೂಡ ಮುಳ್ಳಿನ ಪವಾಡ ಮಾಡಿದ ವ್ಯಕ್ತಿಗೆ ಯಾವುದೇ ರೀತಿಯ ಗಾಯಗಳಾಗದಿರುವುದು ಆಶ್ಚರ್ಯ. ವೈಜ್ಞಾನಿಕವಾಗಿ ಸಮಾನವಾಗಿ ಜೋಡಿಸಿದ ಮುಳ್ಳುಗಳಲ್ಲಿ ಮನುಷ್ಯನ ಸಮಾನವಾದ ದೇಹವನ್ನು ಇರಿಸಿದರೆ, ಮುಳ್ಳುಗಳ ಮೇಲೆ ಸಮಾನವಾದ ಭಾರ ಬಿದ್ದಾಗ ಯಾವುದೇ ಗಾಯಗಳಾಗುವುದಿಲ್ಲ ಎನ್ನುವುದು ವೈಜ್ಞಾನಿಕ ಸತ್ಯವಾದರೂ, ಇಲ್ಲಿನ ಮುಳ್ಳಿನ ಪವಾಡದ ವಿಶೇಷತೆಯು ಬೇರೆ.

ಸಂಪ್ರದಾಯದಂತೆ ದಾಸ ಮುದ್ರೆಯನ್ನು ಹೊತ್ತ ಆಂಜನೇಯನ ದಾಸಪ್ಪಂದಿರು ಶುಚಿತ್ವರಾಗಿ ನಿರಾಹಾರದಿಂದ ಕೋಗಳಿ ಈಶಾನ್ಯ ದಿಕ್ಕಿನಲ್ಲಿರುವ ಅಡವಿಗೆ ಹೋಗಿ ಮುಳ್ಳು ಗದ್ದುಗೆಯನ್ನು ನಿರ್ಮಿಸುವುದಕ್ಕಾಗಿ ಗಂಡುಗಾರಿಯ ಮುಳ್ಳನ್ನು ತರುತ್ತಾರೆ. ಮುಳ್ಳುಗದ್ದುಗೆ ಎಂದು ನಿಯಮಿಸಿದ ಚಕ್ಕಿನಲ್ಲಿ ಮುಳ್ಳನ್ನು ಸಮಾನವಾಗಿ ಜೋಡಿಸಿ ಗದ್ದುಗೆಯನ್ನು ವಿಶ್ವಕರ್ಮ ಜನಾಂಗದವರು ನಿರ್ಮಿಸುತ್ತಾರೆ. ಈ ಗದ್ದುಗೆಯು ಮೊದ ಮೊದಲು ಬಿದಿರಿನಿಂದ ತಯಾರಿಸಿದ್ದಾಗಿತ್ತು. ಆದರೆ ಇಂದು ಇದು ಮಳೆ, ಗಾಳಿ ಬಿಸಿಲಿಗೆ ಹಾಳಾಗಬಾರದೆಂದು ಊರಿನ ಕಮಿಟಿಯವರು ಸೇರಿ ಕಬ್ಬಿಣದ ಗದ್ದುಗೆಯನ್ನು ನಿರ್ಮಿಸಿದ್ದಾರೆ.

ಮುಳ್ಳಿನ ಪವಾಡ ಮಾಡುವ ದಾಸಪ್ಪನಾದ ಈಶ್ವರಪ್ಪನು ಕೂಡ ಕಂಕಣಧಾರಣದ ಸಮಯದಲ್ಲಿ ಕಂಕಣವನ್ನು ಕಟ್ಟಿಕೊಂಡು ಮೂರು ದಿನಗಳ ಕಾಲ ನಿರಾಹಾರಿಯಾಗಿದ್ದು, ದ್ರವರೂಪದ ಆಹಾರವನ್ನು ಮಾತ್ರ ತೆಗೆದುಕೊಂಡಿರುತ್ತಾನೆ. ಪವಾಡವನ್ನು ಮಾಡುವ ನಿಗದಿತ ಸಮಯದಲ್ಲಿ ಈತನು ಕೌಫೀನದಾರನಾಗಿರುತ್ತಾನೆ. ಬರಿ ಮೈಯಿಂದ ಈತನನ್ನು ನೋಡಲು ಆಕರ್ಷಣೀಯವಾಗಿ ಕಾಣುತ್ತಿರುತ್ತಾನೆ. ದಾಸಪ್ಪನಿಗೆ ವಿಶ್ವಕರ್ಮದ ಜನಾಂಗದ ಕಲಾವಿದನೊಬ್ಬ ಆಂಜನೇಯನ ಅವತಾರವೇನೋ ಎನ್ನುವ ಹಾಗೆ ಬಣ್ಣವನ್ನು ಮೈಗೆ ಬಳಿದು ಸಾಕ್ಷಾತ್ ಆಂಜನೇಯನ ರೂಪು ಬರುವಂತೆ ಅಲಂಕರಿಸಿರುತ್ತಾನೆ. ಮಂಗಲವಾದ್ಯಗಳೊಡನೆ ಕಳಶ ತೆಗೆದುಕೊಂಡು ದಾಸಪ್ಪನ ಮನೆಗೆ ಹೋಗಿ ಪವಾಡದ ಕಾರ್ಯವನ್ನು ನಡೆಸಿಕೊಡುವಂತೆ ಊರಿನ ಹಿರಿಯ ಮುಖಂಡರು ಬಿನ್ನಹ ಕೋರುತ್ತಾ ಕರೆತರುತ್ತಾರೆ. ಮೊದಲಿಗೆ ಆಂಜನೇಯನ ದೇವಸ್ಥಾನಕ್ಕೆ ಬಂದು ನಂತರ ಊರಿನ ಎಲ್ಲಾ ಬೀದಿ ಬೀದಿಗಳಲ್ಲೂ ಓಡಾಡಿ ಎಲ್ಲಾ ದೇವ ಮಂದಿರಗಳಿಗೆ ತೆರಳಿ ಭಕ್ತಿಯಿಂದ ನಮಿಸಿ, ಪವಾಡದ ನಿಗಧಿತ ಸ್ಥಳಕ್ಕೆ ಅಂದರೆ ಪಾದಗಟ್ಟಿಯ ಹತ್ತಿರ ಕರೆತರುತ್ತಾರೆ. ಮೂರು ನಾಲ್ಕು ದಿನಗಳ ಕಾಲ ನಿರಾಹಾರಿಯಾಗಿದ್ದ ದಾಸಪ್ಪನನ್ನು ಊರಿನ ತುಂಬೆಲ್ಲ ಮೆರವಣಿಗೆ ಮಾಡಿಕೊಂಡು ಬಂದು ಮುಳ್ಳಿನ ಗದ್ದುಗೆಯ ಮೇಲೆ ಮಲಗಿಸಿ, ಊರಿನ ತುಂಬಾ ಪುನಃ ಮೆರವಣಿಗೆ ಮಾಡಿಕೊಂಡು ಆಂಜನೇಯನ ದೇವಾಲಯಕ್ಕೆ ಕರೆತರುತ್ತಾರೆ. ಇದರ ಉದ್ದೇಶ ಮಾರಕ ಕಾಯಿಲೆಗಳು ಗ್ರಾಮಕ್ಕೆ ಬಾರದಿರಲಿ ಎನ್ನುವುದಾಗಿದೆ. ಗಂಡುಗಾರಿಯ ಮುಳ್ಳನ್ನು ತಂದು ಗದ್ದುಗೆಯನ್ನು ನಿರ್ಮಿಸಿ ದಾಸಪ್ಪನನ್ನು ಅದರ ಮೇಲೆ ಮಲಗಿಸಿ ಬೇವಿನ ತೊಪ್ಪಲಿನಿಂದ ಗಾಳಿಯನ್ನು ಬೀಸುವುದರ ಮುಖಾಂತರ ಮುಳ್ಳಿನ ಪವಾಡವನ್ನು ನೆರವೇರಿಸುತ್ತಾರೆ. ಇದನ್ನು ನೋಡುವುದಕ್ಕಾಗಿ ಸುತ್ತ-ಮುತ್ತಲಿನ ಗ್ರಾಮಗಳ ಜನರು ಕೋಗಳಿಗೆ ಬಂದು ಊರಿನ ಜನರೊಂದಿಗೆ ಯಾವುದೆ ಭೇದ-ಭಾವವಿಲ್ಲದೆ ಪಾಲ್ಗೊಂಡು ಭಾವೈಕ್ಯತೆಯನ್ನು ಮೆರೆಯುತ್ತಾರೆ.

ಈ ಪವಾಡ ಕಾರ್ಯಕ್ರಮದಲ್ಲಿ ಊರಿನ ಸರ್ವ ಮತೀಯರು ಸುಮಂಗಲಿಯರು ಒಂದೊಂದು ಕಾರ್ಯದಲ್ಲಿ ತೊಡಗಿ, ಕಾರ್ಯ ನಿರ್ವಹಿಸಿ ಇವರೆಲ್ಲರೂ ಐಕ್ಯತೆಯ ಭಾವನೆಯಿಂದ ವರ್ಣಭೇದ, ವರ್ಗಭೇದವನ್ನು ಮರೆತು ಎಲ್ಲರೂ ಸೋದರ ಭಾವದಲ್ಲಿ ಸಂತೋಷವನ್ನು ಹಂಚಿಕೊಳ್ಳುವುದು ಒಂದು ವಿಶೇಷ. ಹಾಗೂ ಮುಳ್ಳು ಪವಾಡ ನೆರವೇರುವಾಗ ದಾಸಪ್ಪನನ್ನು ಪ್ರೋತ್ಸಾಹಿಸಲು ಭಕ್ತಾದಿಗಳು ರಾಮನಾಮ, ವೀರಘೋಷ, ಯುವಕರ, ಮನೋರಂಜನೆಯ ಕೂಗಾಟ, ವಿವಿಧ ವಾದ್ಯಗಳ ಸದ್ದುಗದ್ದಲ, ಆಕರ್ಷಣಿಯವಾಗಿ ಕಂಡರೂ ಅಚಲರ ಮನಸ್ಸಿಗೆ ಭಯಾನಕವಾಗಿ ಮುಗ್ಧರ, ಭಕ್ತರ ಮನಸ್ಸಿಗೆ ಭಕ್ತಿಯ ಧ್ಯೋತಕವಾಗಿ ಆ ಮುಳ್ಳು ಹಾಸಿಗೆಯ ಮೇಲೆ ಮಲಗಿದ ಆಂಜನೇಯ ಸ್ವರೂಪಿ ದಾಸಪ್ಪನು ಕಂಗೊಳಿಸುತ್ತಾನೆ. ಮುಳ್ಳಿನ ಗದ್ದುಗೆಯ ಮೇಲೆ ಮಲಗಿದ ಆಂಜನೇಯನ ಸ್ವರೂಪಿ ಪವಾಡದ ವ್ಯಕ್ತಿಯ ಮೆರವಣಿಗೆ ಊರಿನಲ್ಲಿ ಮೆರವಣಿಗೆಯಾಗುವ ಸಮಯದಲ್ಲಿ ಊರಿನ ಸುಮಂಗಲಿಯರು ಆರತಿ ಎತ್ತಿ ಕೈ ಮುಗಿಯುವುದು, ಮತ್ತು ಗದ್ದುಗೆಗೆ ಅಡ್ಡಲಾಗಿ ಮಲಗಿಕೊಂಡು ತಮ್ಮ ತಪ್ಪುಗಳನ್ನು ಮನ್ನಿಸಿ ಆಶೀರ್ವದಿಸಲೆಂದು ತಮಗೆ ಒಳ್ಳೆಯದಾಗಲೆಂದು ಬೇಡಿಕೊಂಡು ಹರಕೆಯನ್ನು ಹೊರುವುದು

ವಾಡಿಕೆ. ಹರಕೆಯು ಈಡೇರಿದರೆ ಮುಂದಿನ ವರ್ಷ ಹರಕೆಯನ್ನು ಒಪ್ಪಿಸುವುದು ವಾಡಿಕೆಯಾಗಿ ಬಂದಿದೆ. ಹೀಗೆ ಗ್ರಾಮದ ತುಂಬಾ ದಾಸಪ್ಪನ ಮೆರವಣಿಗೆಯು ಸಾಂಪ್ರದಾಯಿಕವಾಗಿದ್ದರೂ ಧರ್ಮದ ಮೂಲಕ ದಾರ್ಶನಿಕ ಭಾವನೆಯನ್ನು ಮೂಡಿಸುತ್ತದೆ. ಮುಳ್ಳಿನ ಪವಾಡ ಮುಗಿದ ನಂತರ ಆ ಗದ್ದುಗೆಯ ಮುಳ್ಳನ್ನು ನೆರೆದಿರುವ ಭಕ್ತಾದಿಗಳು ತಮ್ಮ ತಮ್ಮ ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಪವಾಡದ ಗದ್ದುಗೆಯ ಮುಳ್ಳನ್ನು ಮನೆಯಲ್ಲಿ ಇಟ್ಟು ಪೂಜೆ ಮಾಡಿದರೆ ಯಾವುದೇ ರೀತಿಯ ಮಾರಕ ಕಾಯಿಲೆಗಳು ಮನೆಯಲ್ಲಿ ಕಾಣಿಸಿಕೊಳ್ಳುವುದಿಲ್ಲ ಎನ್ನುವ ನಂಬಿಕೆ ಜನಪದರದು. ಮುಳ್ಳು ಗದ್ದುಗೆಯ ಉತ್ಸವವು ಆಂಜನೇಯನ ದೇವಾಲಯವನ್ನು ತಲುಪಿದಾಗ ಅರ್ಚಕನು ಪವಾಡ ನಡೆಸಿದ ದಾಸಪ್ಪನ ಮುಖಕ್ಕೆ ದೇವತಾ ತೀರ್ಥವೆಂಬ ನೀರನ್ನು ಸಿಂಪಡಿಸುತ್ತಾರೆ. ಆಗ ನಿದಾನಕ್ಕೆ ಮೂರ್ಚೆಯಿಂದೆದ್ದ ದಾಸಪ್ಪನನ್ನು ದೈವದವರು (ದೇವಸ್ಥಾನದ ಕಮಿಟಿ) ಉಡುಗೊರೆಯನ್ನು ಕೊಟ್ಟು ಗೌರವಿಸಿ ಕಾರ್ಯಕ್ರಮ ನಡೆಸಿಕೊಟ್ಟದ್ದಕ್ಕಾಗಿ ಕೃತಜ್ಞತಾ ಭಾವನೆಯಿಂದ ಕಾಣಿಕೆಯನ್ನು ಕೊಟ್ಟು ಗೌರವಿಸುತ್ತಾರೆ. ಜೊತೆಗೆ ಮೂರು ನಾಲ್ಕು ದಿನಗಳವರೆಗೆ ನಿರಾಹಾರಿಯಾಗಿದ್ದ ದಾಸಪ್ಪನಿಗೆ ಒಪ್ಪತ್ತು ಬಿಡಿಸಲು ಅಕ್ಕಸಾಲಿಗರ ಮನೆಯಲ್ಲಿ ದೈವದವರೆ ಅಡುಗೆ ವೆಚ್ಚವನ್ನು ಕೊಟ್ಟು ಸಿಹಿ ಅಡುಗೆಯನ್ನು ಮಾಡಿಸಿರುತ್ತಾರೆ. ದಾಸಪ್ಪನನ್ನು ವಾದ್ಯಗಳ ಮುಖಾಂತರ ಊರಿನ ಅಕ್ಕಸಾಲಿಗರ ಮನೆಗೆ ಮಡಿ ಬಟ್ಟೆಯನ್ನು ಹಾಸುತ್ತಾ ಕರೆದೊಯ್ಯುತ್ತಾರೆ. ಅವರ ಮನೆಯಲ್ಲಿ ಸ್ನಾನಾದಿಗಳನ್ನು ಮಾಡಿಸಿ ಹೊಸ ವಸ್ತ್ರಗಳನ್ನು ಕೊಟ್ಟು ಸಿಹಿ ಊಟ ಮಾಡಿಸುತ್ತಾರೆ. ನಂತರ ಐದು ಮನೆಗಳಿಗೆ ಹೋಗಿ ಲಕ್ಷ್ಮೀರಮಣಗೋವಿಂದ ಎಂದು ಕೂಗಿ ಭಿಕ್ಷೆ ಬೇಡುವ ರೂಢಿಯು ಇದೆ. ಇದನ್ನು ಪರಾಮರ್ಶಿಸಿ ನೋಡಿದಾಗ ಊರಿನ ಯಾವೊಂದು ಸಮುದಾಯದವರು ಕೂಡ ಯಾವುದೇ ಭಿನ್ನಾಭಿಪ್ರಾಯಗಳಿಲ್ಲದೆ ದೇವತಾ ಕಾರ್ಯ ಹಂಚಿಕೊಂಡು ನಡೆಯಿಸಿಕೊಂಡು ಬಂದಿರುವುದು ತಿಳಿಯುತ್ತದೆ. ನಂತರದ ಐದಾರು ಶನಿವಾರದ ದಿನ ಬೆಳಿಗ್ಗೆ ದಾಸಪ್ಪನು ಊರಿನಲ್ಲಿ ಅಲೆದಾಡಿ ಭಿಕ್ಷೆ ಬೇಡುವ ಸಂಪ್ರದಾಯವಿದೆ.

ಅಕ್ಕಸಾಲಿಗರ ಮನೆಗೆ ಹೋಗಿ ತಮ್ಮ ಉಪವಾಸ ವ್ರತದ ನಿಬಂಧನಾ ವಿಧಿಯನ್ನು ದಾಸಪ್ಪನು ಬಿಡುತ್ತಾನೆ. ಆ ಕೂಡಲೇ ಭಿಕ್ಷೆ ಬೇಡುವ ಉದ್ದೇಶ ಹಮ್ಮನ್ನು ಮರೆತು ದಾಸ್ಯ ಭಾವದಿಂದ ಸಮಾನತೆಯನ್ನು ಸರ್ವರಲ್ಲಿಯೂ ನೆಲೆಗೂಡಿಸುವುದು ದ್ಯೋತಕ, ಮನೆಮನೆಗೆ ಹೋಗಿ ಬಿಕ್ಷೆ ಬೇಡುವುದು ಆಗಿರಬಹುದು. ಅಹಂಕಾರವನ್ನು ಮರೆತು ಸಮಾನತೆಯಿಂದ ಜೀವನ ನಡೆಸುವಂತೆ ನಮ್ಮ ಜನಪದರು ಹಾಕಿಕೊಟ್ಟ ಮಾರ್ಗದರ್ಶನವಾಗಿದೆ.

**ಓಕುಳಿ ಹೊಂಡಕ್ಕೆ ಹಂದರ ಹಾಕುವುದು**

ಈ ಹೊಂಡದ ಮೇಲೆ ಹಂದರ (ಚಪ್ಪರ) ನಿರ್ಮಿಸಲು ಬೇಕಾಗುವ ತೆಂಗಿನಗರಿ, ಬಿದಿರಿನ ಕೋಲು, ಮಾವಿನ ತೋರಣ, ಬೇವಿನ ತೋರಣ, ತೆಂಗಿನ ಕಾಯಿಗಳನ್ನು ಈ ಊರಿನ ಯಾವುದಾದರೂ ಪ್ರಗತಿಪರ ರೈತನು ತಮ್ಮ ತೋಟದಿಂದ ಭಕ್ತಿಪೂರ್ವಕವಾಗಿ ತಂದು ಕೊಡಬಹುದು. ಅಂದರೆ ಈ ವರ್ಷದ ಸ್ವಾಮಿಯ ಉತ್ಸವದ ಸಮಯದಲ್ಲಿ ಆ ರೈತನು ನನ್ನ ಎಲ್ಲಾ ವಿಘ್ನಗಳು ಪರಿಹಾರವಾದರೆ ಓಕುಳಿ ಹೊಂಡಕ್ಕೆ ಬೇಕಾಗುವ ಎಲ್ಲಾ ವಸ್ತುಗಳನ್ನು

ಕೊಡುತ್ತೇನೆ ಎಂದು ಬೇಡಿಕೊಂಡಿರಬಹುದು. ಅಂತಹ ವ್ಯಕ್ತಿ ಮುಂದಿನ ವರ್ಷದ ಈ ಕಾರ್ಯಕ್ರಮಕ್ಕೆ ವಸ್ತುಗಳನ್ನು ಒದಗಿಸುತ್ತಾನೆ. ಇಲ್ಲವೆ ಈ ಆಂಜನೇಯನ ಕಾರ್ಯಕರ್ತರು ಒಬ್ಬೊಬ್ಬರ ತೋಟಕ್ಕೆ ಹೋಗಿ ಅವರ ಮನವೊಲಿಸಿ ತರುವುದುಂಟು. ಈ ಹೊಂಡದ ಮೇಲ್ಚಪ್ಪರ ಹಾಕುವುದು ವೀರಶೈವ ಸಮಾಜದವರಿಗೆ ಹಿರಿತನದ ಗೌರವದೊಂದಿಗೆ ನಿರ್ವಹಿಸಲು ಊರಿನ ಹಿರಿಯರು ಒಪ್ಪಿಸಿರುತ್ತಾರೆ.

ವಿಶ್ವಕರ್ಮ ಸಮಾಜದವರು ಬಂದು ನಿಗದಿತ ಸಂಖ್ಯೆಯ ಬಿದಿರು ಕೋಲುಗಳನ್ನು ತೆಗೆದುಕೊಂಡು ಹಂದರ ಹಾಕಿ ನಿಗಧಿತ ಸಂಖ್ಯೆಯ ತೆಂಗಿನ ಗರಿಯನ್ನು ಮೇಲೆ ಹಾಕಿ ಚಪ್ಪರ ಹಾಕಿಕೊಟ್ಟು ವೀರಶೈವ ಸಮಾಜದವರೊಡಗೂಡಿ, ನಿಗದಿತ ಸಂಖ್ಯೆಯ ತೆಂಗಿನ ಕಾಯಿಗಳನ್ನು ವಿಶ್ವಕರ್ಮ ಸಮಾಜದವರು ತೂಗುಕಟ್ಟುತ್ತಾರೆ. ನಂತರ ರಾತ್ರಿಯ ಸಮಯದಲ್ಲಿ ಊಟ ಮಾಡಿಕೊಂಡು ಸರ್ವ ಭಕ್ತರು ಸಂತೋಷವನ್ನು ಅನುಭವಿಸುತ್ತಾರೆ. ಅದೇ ಸಮಯಕ್ಕೆ ನಾಲ್ಕಾರು ದಿನಗಳ ಕಾಲ ದೇವತಾ ಕಾರ್ಯದಲ್ಲಿ ಪಾಲ್ಗೊಂಡ ಯುವಕರೆಲ್ಲರು ಹಸಿವು-ನಿದ್ರೆ ದಣಿವುಗಳನ್ನು ಲೆಕ್ಕಿಸದೇ ಸ್ವಾಮಿಯ ಕಾರ್ಯದಲ್ಲಿ ಆರ್ಥಿಕವಾಗಿ, ದೈಹಿಕವಾಗಿ, ಮಾನಸಿಕವಾಗಿ ದಣಿದಿರುವ ಯುವಕರಿಗೆ ಚೈತನ್ಯವನ್ನು ತುಂಬುವುದಕ್ಕಾಗಿ ಓಕುಳಿ ಕಾರ್ಯವನ್ನು ಹಿರಿಯರು ಪ್ರಾರಂಭಿಸುತ್ತಾರೆ. (ಕಾಯಿ ಹರಿಯುವ ಕೆಲಸ) ಕೋಗಳಿ ನಾಡಿನ ಜನರ ಭಾವನೆಯಲ್ಲಿ ಓಕುಳಿ ಎಂದರೆ ಬಣ್ಣವಲ್ಲ. ಹೊಕ್ಕು ಏಳುವುದು ಎಂದರೆ ಚಪ್ಪರಕ್ಕೆ ಎತ್ತರದಲ್ಲಿ ಕಟ್ಟಿರುವ ಕಾಯಿಗಳನ್ನು ಯುವಕರು ಹರಿಯಲು ಪ್ರಯತ್ನಿಸಿ ಹೊಂಡದಲ್ಲಿ ಬಿದ್ದು ಏಳುವುದು ಎಂದು ಅರ್ಥೈಸುತ್ತಾರೆ. ಯಾರೊಬ್ಬರಿಗೂ ಬಣ್ಣವನ್ನು ಎರಚುವ ಪದ್ಧತಿ ಇಲ್ಲಿ ಇರುವುದಿಲ್ಲ.

ಈ ಓಕುಳಿ ಹೊಂಡವು ಹತ್ತು ಅಡಿ ಉದ್ದ, ಹತ್ತು ಅಡಿ ಅಗಲ ಹತ್ತು ಅಡಿ ಆಳ ಇದ್ದು ಇದಕ್ಕೆ ನೀರು ತುಂಬಿಸುತ್ತಾರೆ. ಗ್ರಾಮದ ಹಬ್ಬ ಆಚರಣೆಗಳಿಗೆ ಅನುಕರಣೀಯವಾಗಿ ಈ ಹೊಂಡಕ್ಕೆ ಬೆಳಗಾಗುವವರೆಗೂ ವಾಲ್ಮೀಕಿ ಜನಾಂಗದ ಮನೆಗೊಬ್ಬರಂತೆ ಪ್ರತಿನಿಧಿಗಳು ಬಂದು ಕೊಡಗಳಿಂದ ಬಾವಿ-ಬಾವಿಗಳಿಂದ ನೀರನ್ನು ಹೊತ್ತು ತಂದು ನೀರನ್ನು ತುಂಬಿಸುತ್ತಾರೆ.

ನಂತರದ ದಿನ ಯುಗಾದಿಯ ತದಿಗಿಯದಿನ ರಾತ್ರಿ ಮುಳ್ಳುಪವಾಡವಾದ ನಂತರ ಕಾಯಿ ಹರಿಯುವ ಓಕುಳಿ ಕಾರ್ಯಕ್ರಮ ನಡೆಯುತ್ತದೆ. ಈ ಓಕುಳಿಯಾಡುವ ಕಾರ್ಯವು ಎಲ್ಲರಿಗೂ ತಿಳಿಯಲೆಂದು ದೈವದವರು ಊರಿನ ಹರಿಜನರ ಯುವಕರನ್ನು ಕರೆದು ಹಲಗೆಯಿಂದ ತಮಟೆ ಹೊಡೆದು ಡಂಗೂರ ಸಾರಿಕೊಂಡು ಬರುವಂತೆ ನಿರ್ದೇಶಿಸುತ್ತಾರೆ. ಮುಳ್ಳು ಪವಾಡವನ್ನು ನಡೆಯಿಸಿಕೊಟ್ಟ ದಾಸಪ್ಪನ ನೇತೃತ್ವದಲ್ಲಿ ಓಕುಳಿ ಕಾರ್ಯಕ್ರಮ ಜರುಗುತ್ತದೆ, ಇದರಲ್ಲಿ ಪರಿಶಿಷ್ಟ ಜನಾಂದವರಾದ ವಾಲ್ಮೀಕಿ ಸಮೂದಾಯದವರು ಒಂದೊಂದು ಬೆಡಗು ಅಥವಾ ತೋಳುಗಳಿಗೆ ಒಬ್ಬರಂತೆ ಕಾಯಿ ಹರಿದುಕೊಳ್ಳುವ ಸಲುವಾಗಿ ಮೇಲಕ್ಕೆ ಹಾರಿ ಕೆಳಕ್ಕೆ ಬಿದ್ದು ಕಾಯಿಯನ್ನು ಹರಿದುಕೊಂಡು ಹೊಂಡವನ್ನು ಹೊಕ್ಕು ಏಳುವ ಈ ಕಾರ್ಯದಲ್ಲಿ ಊರಿನ ಐಕ್ಯತೆಯ ಮನೋಭಾವನೆಯ ಬೆಸುಗೆಯಾಗಿ ಗೌರವಾರ್ಥವಾಗಿ – ಒಂದು ವೀರಶೈವ

ಸಮಾಜದವರು ಕಲಶ, ಒಂದು ಕುರುಬ ಜನಾಂಗದ ಕಲಶವನ್ನು ಮಂಗಲ ವಾದ್ಯಗಳ ಮುಖಾಂತರ ಕರೆತಂದು ಸ್ವಾಮಿಯ ಪಲ್ಲಕ್ಕಿಯನ್ನು ಹೊತ್ತು ಹೊಂಡದ ಪ್ರದಕ್ಷಿಣೆಯೊಂದಿಗೆ ನೀರು ತುಂಬಿದ ಹೊಂಡವನ್ನು ಪೂಜಿಸಿ ನೈವೇದ್ಯವನ್ನು ಅರ್ಪಿಸುತ್ತಾರೆ. ಆಗಮಿಸಿದ ಸುಮಂಗಲಿಯರು ಆರತಿ ಬೆಳಗುವುದರ ಮುಖಾಂತರ ಹೊಂಡಕ್ಕೆ ಇಳಿಯಲು ಅನುವು ಮಾಡಿ ಕೊಡುತ್ತಾರೆ. ಆಂಜನೇಯನ ಅರ್ಚಕರಾದವರು ರಾಮನಾಮ ಘೋಷಣೆಯೊಂದಿಗೆ ಹನುಮಂತನು ಸಾಗರೋಲ್ಲಂಘನ ಮಾಡುವ ತೆರದಿ ಹೊಂಡವನ್ನು ಮೊದಲು ಪ್ರವೇಶಿಸುತ್ತಾರೆ. ನಂತರ ಯುವಕರೆಲ್ಲರೂ ವಾನರರ ಕೂಗಾಟದಂತೆ, ಅವುಗಳ ಹಾರಾಟದಂತೆ, ತಮ್ಮ ದೇಹದಶಕ್ತಿ ಪ್ರದರ್ಶನವನ್ನು ಮಾಡುತ್ತ ಜಿಗಿ-ಜಿಗಿದು ಏಕಕಾಲದಲ್ಲಿ ಕಾಯಿಯನ್ನು ಹಿಡಿಯಲು ಪ್ರಯತ್ನಿಸಿ ಕಾಯಿ ಸಿಗದೆ ಕೆಳಗೆ ಬಿದ್ದವರನ್ನು ನೋಡುತ್ತಾ ಜನರೆಲ್ಲರು ಸಂತೋಷವನ್ನು ಅನುಭವಿಸುತ್ತಾರೆ. ಮತ್ತು ಅವರನ್ನು ಹುರಿದುಂಬಿಸುವಾಗ ಎಲ್ಲ ಭಾಗವಹಿಸಿದ ಯುವಕರು ತಮ್ಮ ತಮ್ಮ ಕಾಯಿಯನ್ನು ಹರಿದು ನೀರಿನಲ್ಲಿ ಹಾಕಿ ನೀರಿನಲ್ಲಿ ಎಗರಾಡುತ್ತಾ ಈಜಾಡುತ್ತಾರೆ. ಓಕುಳಿಯಾಡುವುದು ಮುಗಿದ ಕೂಡಲೇ ಆಯಕಾರರೆಲ್ಲರು ಯುಗಾದಿ ಹಬ್ಬದ ಕಾರ್ಯಕ್ರಮದ ಪೂರ್ವಭಾವಿಯಲ್ಲಿ ದಕ್ಷತೆ, ಶ್ರದ್ಧೆ, ಶಾಂತಿ, ಸಮಾನತೆ, ಸದ್ಭಾವನೆಗಳನ್ನು ಬಿಂಬಿಸಿ ಕಾರ್ಯಕ್ರಮದ ಪರಿಪೂರ್ಣ ಜವಾಬ್ದಾರಿಯನ್ನು ಇವರ ಮೇಲಿರಿಸಿದ ಕಂಕಣಧಾರಣದ ಜವಾಬ್ದಾರಿಯನ್ನು ಗಂಗೆಗೆ ಹೋಗಿ ಪೂಜೆ ಮಾಡಿ ಕಂಕಣವನ್ನು ಬಿಚ್ಚುವುದರ ಮೂಲಕ ಸೇವಾ ಭಾವದ ಕೈಂಕರ್ಯವನ್ನು ದೇವರ ಮುಂದೆ ಸಮರ್ಪಣೆ ಮಾಡುತ್ತಾರೆ. ನಂತರ ಗಂಗೆಗೆ ಪಲ್ಲಕ್ಕಿಯಲ್ಲಿ ಕೊಂಡೊಯ್ದು ಮೂರ್ತಿಯನ್ನು ವಾದ್ಯಗಳ ಮೂಲಕ ಕರೆತಂದು ದೇವಸ್ಥಾನಕ್ಕೆ ತಲುಪಿಸಿ ಯುವಕರು ಹರಿದ ಕಾಯಿಯನ್ನು ಭಕ್ತಿ ಪೂರ್ವಕವಾಗಿ ತಮ್ಮ ತಮ್ಮ ಮನೆಗೆ ತೆಗೆದುಕೊಂಡು ಹೋಗಬೇಕೆಂದು ಹೇಳುತ್ತಾರೆ. ಈ ಕಾಯಿಯನ್ನು ಅವರ ಮನೆಯ ಬಾಗಿಲಿನ ಒಳ ಮೊಗ್ಗಲಿನಲ್ಲಿ ಕಟ್ಟುತ್ತಾರೆ. ಇದರಿಂದ ಆ ಮನೆಯು ಸದಾವಕಾಲ ಶಾಂತಿ ನೆಮ್ಮದಿಯಿಂದ ತುಂಬಿರುತ್ತದೆ ಎನ್ನುವ ನಂಬಿಕೆಯು ಜನರಲ್ಲಿ ಇದೆ. ದೇವರ ಹೊಂಡದ ಪೂಜೆಯ ಕಾಯಿಯೆಂತಲೂ ಅದನ್ನು ದಿನಂಪ್ರತಿ ಪೂಜಿಸುತ್ತಾರೆ. ಇದರಿಂದ ತುಂಬಿದ ಕಾಯಿಯು ಮನೆಯಲಿದ್ದರೆ, ಅದನ್ನು ಪೂಜಿಸಿದರೆ ಮನೆಗೆ ಶುಭವಾಗುತ್ತದೆ ಎಂದು ಹೇಳುತ್ತಾರೆ.

**ಕಡುಬಿನ ಕಾಳಗ**

ಚಂದ್ರಮಾನ ಯುಗಾದಿಯ ಪಂಚಮಿಯ ದಿನ ಬೆಳಗ್ಗೆ ಊರಿನ ಯಾವ ರೈತನಾದರೂ ಸರಿ ಅವರ ಮನೆಯಲ್ಲಿ ಬೆಳೆದ ರಾಗಿಗಳಿದ್ದರೆ ಅವರಾಗಿಯೇ ಆದರೂ ತೆಗೆದುಕೊಂಡು ಬಂದು ಕೊಡಬಹುದು. ಅಥವಾ ಕಾರ್ಯಕರ್ತರಾದರೂ ಬೇಡಿಕೊಂಡು ತರಬಹುದು. ಹೀಗೆ ತಂದ ರಾಗಿಯನ್ನು ಬೀಸಿ ಕಡುಬು ಮಾಡುತ್ತಾರೆ. ಆಂಜನೇಯ ದೇವಸ್ಥಾನದ ಕಾರ್ಯಕ್ರಮದ ರುವಾರಿಗಳಾದ ಪರಿಶಿಷ್ಟ ಪಂಗಡದ ಜನಾಂಗದ ಮುಖಂಡರು ಅಥವಾ ಗುರಿಕಾರರು (ಹಿರಿಯರು) ಯಾರ ಮನೆಯಲ್ಲಾದರೂ ಸರಿ ಅಥವಾ ಈ ಹಿಂದೆ ರೂಢಿಯಲ್ಲಿದ್ದ ಆಂಜನೇಯನ ದೇವದಾಸಿಯರ ಮನೆಯಲ್ಲಿ ಕಡುಬನ್ನು ಮಾಡಿಸಿ ಗ್ರಾಮದ ಸಮಸ್ಥ ಭಕ್ತಾದಿಗಳು ತಿಳಿಯುವಂತೆ ಊರಿನ ಹಿರಿಯರು ಕಡುಬಿನ ಕಾಳಗ ನಡೆಯುತ್ತದೆ ಎಂದು

ಹರಿಜನರ ಯುವಕರಿಂದ ಹಲಗೆಯಿಂದ ತಮಟೆ ಹೊಡೆದು ಬರುವಂತೆ ಹೇಳುತ್ತಾರೆ. ಇತ್ತ ಕಡುಬು ತಯಾರಾದ ಮನೆಗೆ ಸಕಲ ವಾದ್ಯಗಳೊಂದಿಗೆ ಹೋಗಿ ಕಡುಬಿನ ಪುಟ್ಟಿಯನ್ನು ಹೊತ್ತು ಆಂಜನೇಯನ ಗುಡಿಯ ಮುಂದಕ್ಕೆ ತರುತ್ತಾರೆ. ಮುಳ್ಳು ಪವಾಡ ನೆರವೇರಿಸಿ ಕೊಟ್ಟ ದಾಸಪ್ಪನನ್ನು ಕರೆತಂದು ಕಡುಬಿನ ಕಾಳಗದ ಕಾರ್ಯಕ್ಕೆ ಚಾಲನೆಯನ್ನು ಕೊಡುತ್ತಾರೆ. ಹಾಗೆಯೇ ಮಡಿವಾಳದ ಪ್ರಮುಖರನ್ನು ಕಡುಬನ್ನು ಸುರಿಯಲು ಹಾಸಿಗೆ ಹಾಸುವಂತೆ ಕೇಳುತ್ತಾರೆ. ಇದರ ಉದ್ದೇಶ ಕಡುಬನ್ನು ನೆಲದ ಮೇಲೆ ಚಲ್ಲಿದರೆ ಕಡುಬು ಮತ್ತು ತಿಂಡಿ ತಿನಿಸುಗಳು ಮಣ್ಣಾಗಬಾರದೆಂದು ಅವರ ತಿಳುವಳಿಕೆ. ಕಡುಬಿನ ಕಾಳಗವೆಂದರೆ ಇಲ್ಲಿ ಕಡುಬಿನಿಂದ ಹೊಡೆದಾಡುವುದಲ್ಲ ಅಥವಾ ಇದೊಂದು ಯುದ್ಧವಲ್ಲ. ಪ್ರೀತಿಯ ಧ್ಯೋತಕದ ಮನೋರಂಜನೆಯ ಕಾರ್ಯಕ್ರಮವಾಗಿದೆ. ಕಡುಬಿನ ಕಾಳಗವೆಂದರೆ ಮಡಿವಾಳನು ತಂದ ಮಡಿ ಬಟ್ಟೆಯನ್ನು ನೆಲದ ಮೇಲೆ ಹಾಸಿ ಬಟ್ಟೆಯ ಮೇಲೆ ಕಡುಬುಗಳನ್ನು ಹಾಕಿ ೯ಜನ ಅಥವಾ ೧೬ಜನ ಆಂಜನೇಯನ ಶಂಕ ಮತ್ತು ಚಕ್ರದ ಮುದ್ರೆಯನ್ನೊತ್ತ ದಾಸಪ್ಪಂದಿರು ಆಡುತ್ತಾರೆ. ಅಲ್ಲದೆ ಊರಿನ ವ್ಯಾಪಾಸ್ಥರ ವಿವಿಧ ರೀತಿಯ ತಿಂಡಿ–ತಿನಿಸುಗಳನ್ನು, ಬಾಳೆಹಣ್ಣುಗಳನ್ನು ತಂದು ಕಡುಬಿನ ಜೊತೆಗೆ ಇಟ್ಟು ಆಟ ಆಡಿ ನಾಮುಂದು ತಾಮುಂದು ಎಂದು ಮುಗಿ ಬಿದ್ದು ತೆಗೆದುಕೊಳ್ಳುವುದನ್ನು ನೋಡಿ ಸಂತೋಷ ಪಡುತ್ತಾರೆ. ಕಡುಬಿನ ಕಾಳಗದಲ್ಲಿ ದೊರೆತ ಕಡುಬನ್ನು ನೆರೆದ ಜನರು ದುಡ್ಡು ಕೊಟ್ಟು ಕೊಂಡುಕೊಳ್ಳುತ್ತಾರೆ. ಅದರಿಂದ ಅತ್ತೆ, ಮಾವ, ಸೊಸೆ, ತಾತ, ಅಜ್ಜಿಯಾಗುವವರನ್ನು ಹೊಡೆದೊಡೆದು ರಂಜಿಸುತ್ತಾರೆ. ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ಯುವಕರು ಮನೋರಂಜನೆಗಾಗಿ ಯಾವ ಮತಿಯರೇ ಆಗಿರಲಿ ತಮ್ಮ ಗೆಳೆತನ ಪ್ರೀತಿಗಾಗಿ ಒಬ್ಬರಿಗೊಬ್ಬರು ಕಡುಬಿನಿಂದ ಹೊಡೆದಾಡುತ್ತಾ ಕಡುಬಿನ ಕಾಳಗ ಎನ್ನುವ ಪದಕ್ಕೆ ಅರ್ಥ ಬರುವಂತೆ ಆ ಹೆಸರು ಅರ್ಥೈಸುವಂತೆ ಮಾಡುತ್ತಾರೆ.

ನಂತರ ನೀರು ತುಂಬಿದ ಹೊಂಡದಲ್ಲಿ ಗೆಳೆಯರೆಲ್ಲರು ಒಬ್ಬರನ್ನೊಬ್ಬರು ಎತ್ತಿ ಹಾಕುತ್ತಾರೆ. ಕಡುಬಿನ ಕಾಳಗವಾಡಿದ ಯುವಕರು, ಹಿರಿಯರು ಕಿರಿಯರ ಮಧ್ಯಾಹ್ನದ ಉರಿ ಬಿಸಿಲಿನ ತಾಪವನ್ನು ಶಮನಗೊಳಿಸಿ ಕೊಳ್ಳುವುದು ಹೊಂಡಕ್ಕೆ ಹೊತ್ತು ಹಾಕುವುದರ ಉದ್ದೇಶವಿರಬಹುದು.

**ಬೇಟೆಗೆ ಹೋಗುವುದು**

ಕಾಳಗದ ನಂತರ ಯುವಕರೆಲ್ಲರ ದೇಹ ನೀರಿನಲ್ಲಿ ಮಿಂದು ತಣ್ಣಗಾದ ಮೇಲೆ ಹಿಂದಿನಿಂದಲೂ ನಡೆದು ಬಂದ ಮತೀಯ ವೈಶಿಷ್ಟಪೂರ್ಣವಾದ, ತಮ್ಮ ಶೌರ್ಯ ಸಾಹಸದ ಪ್ರತಿಬಿಂಬವಾಗಿ ಬೇಟೆಯಾಡಲು ಯುವಕರೆಲ್ಲರೂ ತಮ್ಮ ದೇಹದಾರ್ಢ್ಯತೆಯ ಪ್ರದರ್ಶನ ಮಾಡುತ್ತಾ, ರಾಮಾಯಣದಲ್ಲಿ ಶ್ರೀರಾಮಚಂದ್ರನು ಬೇಟೆಗೆ ಹೋಗುವ ರೀತಿಯಲ್ಲಿ ಈಟಿ, ಕೊಡಲಿ, ಕೋಲು, ದೊಣ್ಣೆಗಳನ್ನು ಹಾಕಿಕೊಂಡು ಬೇಟೆಗೆ ತೆರಳುತ್ತಾರೆ. ಬೇಟೆಗೆ ಹೋದವರು ಆ ದಿನವೇ ಬೇಟೆಯನ್ನು ಹೊಡೆದು ತರಬಹುದು. ಅಥವಾ ಮೂರ್‍ನಾಲ್ಕು ದಿನಗಳಾಗಬಹುದು. ಒಂದುವೇಳೆ ಆ ದಿನವೇ ಬೇಟೆ ಬಿದ್ದಿದೆ ಎಂದು ಸುದ್ದಿ ಊರಿಗೆ ಮುಟ್ಟಿಸಿದರೆ ಮನೆಯವರೆಲ್ಲರೂ

ಬಿಸಿಲು ನೆರಳು ಎನ್ನದೆ ಹೋರಾಡಿ ದಣಿದು ಶಿಖಾರಿ ತಂದಿದ್ದಾರೆ ಎಂದು ದಣಿದ ಶರೀರಕ್ಕೆ ಆಯಾಸವಾಗದ ಹಾಗೆ, ಭಂಗಿ ಸೊಪ್ಪು (ಹಸೆ ತಂಬಾಕು) ಬೆಲ್ಲದ ನೀರನ್ನು ಸಿದ್ಧಪಡಿಸುತ್ತಾರೆ. ಆಗ ಬೇಟೆಯಾಡಿ ತಂದ ಬೇಟೆಯನ್ನು ರಣ ಹಲಗೆಗಳ ಮುಖಾಂತರ ಊರೆಲ್ಲ ಮೆರೆಸಿಕೊಂಡು ಬಂದು ದೇವಸ್ಥಾನದ ಹೊರಾಂಗಣದಲ್ಲಿ ತಂದು ನಿಲ್ಲಿಸಿ ಹಿಂದೆ ನಿಯಮಿಸಿದ ಜವಾಬ್ದಾರಿಯುತವಾದ ಗುರಿಕಾರನ ಮನೆಯಿಂದ ಬೆಲ್ಲದ ನೀರಿನ ಕೊಡವನ್ನು ಪೂಜಿಸಿ ಮೆರವಣಿಗೆಯ ಮುಖಾಂತರ ಬೇಟೆಯು ಇದ್ದಲ್ಲಿಗೆ ತರುತ್ತಾರೆ. ಆಗ ಈ ಸಮುದಾಯದ ಹಿರಿಯರು ಕುರುಬ ಸಮುದಾಯದ ಮುಖ್ಯಸ್ಥ (ಹಟ್ಟಿಯಗೌಡ) ನನ್ನು ಹಿರಿಯರೆಲ್ಲರೂ ಬಿನ್ನೈಸಿಕೊಂಡು ಬೇಟೆ ಮತ್ತು ಬೆಲ್ಲದ ನೀರು ಇರುವ ಆಂಜನೇಯನ ದೇವಸ್ಥಾನದ ಹೊರಾಂಗಣಕ್ಕೆ ಕರೆತಂದು ಮುಂದಿನ ಕಾರ್ಯ ನೆರವೇರಿಸಿ ಕೊಡುವಂತೆ ಕೇಳಿಕೊಳ್ಳುತ್ತಾರೆ. ಬಂದಂತಹ ಹಟ್ಟಿಯಗೌಡ ಅಥವಾ ಕುರುಬರ ಮುಖ್ಯಸ್ಥನನ್ನು ಯುವಕರ ಮಧ್ಯದಲ್ಲಿ ಎತ್ತರದ ಸ್ಥಳದಲ್ಲಿ ಗೌರವಯುತವಾದ ಕಂಬಳಿಯ ಹಾಸಿಗೆಯನ್ನು ಹಾಸಿ ಕೂಡಿಸುತ್ತಾರೆ. ಆತನು ದಣಿದು ಬಂದ ಬೇಟೆಗಾರನಿಗೆ ಪ್ರೀತಿಯ ಮಾತುಗಳಿಂದ ನಿಮ್ಮಲ್ಲಿ ಈ ದಿನದಂತೆ ಸದಾಕಾಲ ಒಗ್ಗಟ್ಟಿನಿಂದ ಇದ್ದು ಎಲ್ಲಾ ದೇವತಾಕಾರ್ಯಗಳನ್ನು ನೆರವೇರಿಸಿ ಎಂದು ಕಿವಿಮಾತು ಹೇಳುತ್ತಾ ಜೊತೆಗೆ ಭಿನ್ನಾಭಿಪ್ರಾಯಗಳನ್ನು ಮರೆತು ಸಮಾನತೆಯ ಬಾಳನ್ನು ಬಾಳಿರಿ ಎಂದು ಹೇಳುತ್ತಾ ಸಿಹಿ ಬೆಲ್ಲದ ನೀರನ್ನು ಬಿಸಿಲಲ್ಲಿ ತಿರುಗಾಡಿ ಬೇಟೆಯನ್ನು ತಂದ ಯುವಕರಿಗೆ ಕುಡಿಸುತ್ತಾನೆ. ಮತ್ತಿನ ಮಿಶ್ರಣದ ಬೆಲ್ಲದ ನೀರನ್ನು ಕುಡಿದ ಯುವಕರು ಆತನ ಮಾತಿಗೆ ತಲೆಹಾಕಿ ಒಪ್ಪಿಗೆಯನ್ನು ಸೂಚಿಸುತ್ತಾರೆ. ಆಗ ಅಲ್ಲಿ ನೆರೆದಿರುವ ಅಥವಾ ಈ ಹಲವರಲ್ಲಿ ಪಾಲ್ಗೊಂಡ ಆಯಗಾರರು (ಆಯ್ಕೆದಾರರು) ಸರದಿಯ ಪ್ರಕಾರ ಆ ವರ್ಷದ ಸರದಿಯು ಯಾರಿಗೆ ಬಂದಿರುತ್ತದೋ ಅವರಿಗೆ ಈ ಬೇಟೆಯನ್ನು ನೀಡಿ ಆಶೀರ್ವದಿಸುತ್ತಾನೆ. ಹಟ್ಟಿಗೌಡನು ಮಾಡಿದ ಈ ಸೇವೆಗೋ ಅಥವಾ ದೈವದ ಕರೆಗೆ ಓಗೊಟ್ಟ ಸಲುವಾಗಿಯೋ ಅಥವಾ ಪುನಃ ಈ ಕಾರ್ಯಕ್ರಮಕ್ಕೆ ಬರಲೆಂದೋ ನೆರೆದ ಜನರಲ್ಲಿ ಗೌರವಯುತವಾಗಿ ದೈವದವರು ಅಥವಾ ಈ ಎಲ್ಲಾ ಯುಗಾದಿಯ ಆಚರಣೆಗಳಿಗೆ ಕಾರಣೀ ಭೂತರಾದ ವಾಲ್ಮೀಕಿ ಸಮುದಾಯದ ಜನರು ಹಟ್ಟಿಗೌಡನ ಮನಸ್ಸು ಸಂತೋಷಗೊಳಿಸಲು ಆತನಿಗೆ ಒಂದು ಕುರಿಯನ್ನು ಉಡುಗೊರೆಯಾಗಿ ಕೊಡುತ್ತಾರೆ. ಹಾಗೆಯೇ ಆತನ ಕುರಿಗಳ ಜೊತೆಗೇನೆ ಬೆಳೆಯುವಂತೆ ಮತ್ತೊಂದು ಕುರಿಯನ್ನು ಬಿಡುತ್ತಾರೆ. ಇದಕ್ಕೆ ರಣದ ಬೇಟೆ ಎಂದೇ ಹೆಸರು. ಇದನ್ನು ಮೂರು ವರ್ಷಕ್ಕೊಮ್ಮೆ ಅಥವಾ ೫ ವರ್ಷಗಳಿಗೊಮ್ಮೆ ಈ ರಣದ ಬೇಟೆಯನ್ನು ಇಡೀ ನಾಯಕ ಸಮುದಾಯದವರು ಹಂಚಿಕೊಂಡು ಊಟಮಾಡುವುದುರ ಮೂಲಕ ಸಂತೋಷ ಪಡುತ್ತಾರೆ. ಈ ರಣದ ಬೇಟೆಯಲ್ಲಿ ಮೊದಲಿಗೆ ಊರಿನ ಎಲ್ಲಾ ಸಮುದಾಯಕ್ಕೂ ಒಂದೊಂದು ಭಾಗವನ್ನು ಕೊಡುವುದು ರೂಢಿ. ಇದರ ಉದ್ದೇಶ ಈ ಗ್ರಾಮದ ಜನತೆಯ ಮಧ್ಯದಲ್ಲಿ ಐಕ್ಯತೆಯ ಮನೋಭಾವನೆಯನ್ನು ಮೂಡಿಸುವುದಾಗಿದೆ. ಸದಾಕಾಲ ಎಲ್ಲರೂ ಸ್ನೇಹ ಸೌಹಾರ್ಧತೆಯಿಂದ ಕೂಡಿ ತಮ್ಮ ಹಿರಿಯರು ಹೇಳಿಕೊಟ್ಟ ಹಬ್ಬ, ಧರ್ಮ, ಪೂಜೆ, ಆಚರಣೆಯ ಮುಖಾಂತರವಾಗಿ ಸಮುದಾಯಗಳ ಮಧ್ಯದಲ್ಲಿ ಯಾವುದೇ ರೀತಿಯ ಕಲಹಗಳು ಬರದಂತೆ ಮಾರ್ಗದರ್ಶನ ಮಾಡಿದ್ದಾರೆ.

ಷಷ್ಠಿಯ ದಿನದಂದು ಬೆಳಿಗ್ಗೆ ಎಲ್ಲಾ ದೈವದವರು ಆಂಜನೆಯ ದೇವಸ್ಥಾನದಲ್ಲಿ ಕೂಡಿ ಗ್ರಾಮದ ಹಿರಿಯರ ಮುಖಾಂತರದಲ್ಲಿ ನಡೆಸಿದ ಕಾರ್ಯಕ್ರಮಗಳಲ್ಲಿ ಅಜಾಗರುಕತೆಯಿಂದ ನಡೆದು ಹೋದ ಅಲ್ಪ ಸ್ವಲ್ಪ ನ್ಯೂನತೆಗಳ ಮರು ಪರಿಶೀಲನೆ ಮತ್ತು ಅವುಗಳ ಸರಿದೂಗಿಸುವಿಕೆ. ಹಬ್ಬದ ಆಯವ್ಯಯಗಳ ಪರಿಶೀಲನೆ ಮಾಡಿ, ನಂತರ ಆಂಜನೇಯನ ಕಟ್ಟಿದ ತೇರನ್ನು ಬಿಚ್ಚಿ ಸಮಾನುಗಳನ್ನು ಸುಭದ್ರವಾಗಿ ಇರಿಸಲು ದಿನಾಂಕವನ್ನು ಆಗಲೇ ತೀರ್ಮಾನಿಸಲಾಗುತ್ತದೆ. ಹೀಗೆ ಯುಗಾದಿಯ ಹಬ್ಬದಲ್ಲಿ ಆಂಜನೇಯನಿಗೆ ಸಂಬಂಧಿಸಿದ ಸಂಪ್ರದಾಯದ ಜೊತೆಗೆ ಸಂಸ್ಕಾರವು ಮತ್ತು ಸಮುದಾಯಗಳ ಮಧ್ಯದಲ್ಲಿ ಸಹಭಾಗಿತ್ವ, ಸಮಾನತೆಯ ಸೌಗಂಧದ ಸುವಾಸನೆಯು ಕೋಗಳಿಯಲ್ಲಿ ಬೀರುತ್ತದೆ. ಸರ್ವರಲ್ಲಿಯೂ ಸುಖ, ಶಾಂತಿ, ನೆಮ್ಮದಿಯನ್ನು ಸಾರುವ ಸಂದೇಶವೇ ಯುಗಾದಿಯಲ್ಲಿ ಆಂಜನೇಯನ ಹಬ್ಬವಾಗಿದೆ.

ಯುಗಾದಿಯ ಸಂದರ್ಭದಲ್ಲಿ ಐದಾರು ದಿನಗಳವರೆಗೆ ಆಂಜನೇಯನಿಗೆ ಸಂಬಂಧಿಸಿದ ಎಲ್ಲಾ ರೀತಿಯ ಆಚರಣೆಗಳನ್ನು ಇಡೀ ಊರಿಗೆ ಊರೆ ಆಚರಿಸುವುದರಿಂದ ಆಂಜನೇಯ ಸ್ವಾಮಿಯು ಈ ಗ್ರಾಮವನ್ನು ರಕ್ಷಿಸುವನೆಂಬ ನಂಬಿಕೆಯು ವಿಶ್ವಾಸವು ಈ ಗ್ರಾಮಸ್ಥರದು. ಅದಕ್ಕಾಗಿ ಅವರಿಗೆ ಮಾರುತಿಯ ಮೇಲೆ ಅಪಾರ ಶ್ರದ್ಧೆ, ಭಕ್ತಿ. ಈ ಗ್ರಾಮದವರೆಲ್ಲರು ಮಾರುತಿಯ ಭಕ್ತರು, ಆರಾಧಕರು, ಹೀಗಾಗಿ ಇಲ್ಲಿ ಆಂಜನೇಯನ ಆರಾಧನೆ ಪ್ರಾಧಾನ್ಯತೆ ಪಡೆದಿದೆ. ಇಲ್ಲಿನ ಜನರು ಆಂಜನೇಯನಿಗೆ ಎಲೆ ಪೂಜೆ, ಕುಂಕುಮ ಪೂಜೆ, ಬೆಳ್ಳಿ, ಬಂಗಾರದ ಆಭರಣಗಳನ್ನು, ಕಂಚಿನ ಪ್ರಭಾವಳಿಯನ್ನು, ಕಂಚಿನ ಘಂಟೆಗಳನ್ನು ಅರ್ಪಿಸುತ್ತಾರೆ. ವಿಗ್ರಹವನ್ನು ಇವುಗಳಿಂದ ಅಲಂಕರಿಸಿ, ಧಾರ್ಮಿಕ ವಿಧಿಗಳನ್ನು ನೆರವೇರಿಸುವರು. ಭಕ್ತಾದಿಗಳು ಹರಕೆ ಸಲ್ಲಿಸುತ್ತಾರೆ. ಜಲಾಭಿಷೇಕ, ಪಂಚಾಮೃತ ಅಭಿಷೇಕಗಳಿಂದ ಪೂಜೆ ಸಲ್ಲಿಸಲು ಹಲವೆಡೆಯಿಂದ ಜನರು ಬರುತ್ತಾರೆ.

ಕೋಗಳಿಯಲ್ಲಿ ಯುಗಾದಿಯ ಸಮಯದಲ್ಲಿ ಆಂಜನೆಯನಿಗೆ ಸಂಬಂಧಿಸಿದ ಆಚರಣೆಗಳನ್ನು ನೋಡಿದರೆ ಈ ಎಲ್ಲಾ ಆಚರಣೆಗಳು ರಾಮಾಯಣದ ಪ್ರಮುಖ ಸಂದರ್ಭದ ಸಂಕೇತಗಳಾಗಿ ಕಂಡುಬರುತ್ತವೆ. ರಾಮ ಸೀತೆಯರ ಮದುವೆ ಮಾಡುವುದು (ಕಂಕಣ ಕಟ್ಟಿ ದೇವರನ್ನು ಪೂಜಿಸುವುದು) ರಾಮಸೀತೆಯರ ಮದುವೆಯ ನಂತರ ಮೆರವಣಿಗೆ ಮಾಡುವುದು (ರಥೋತ್ಸವ) ಆಂಜನೇಯ ಸಂಜೀವಿನಿ ಗಿಡ ತರುವುದು (ಬ್ಯಾಟಿಗಿಡ ತರುವುದು) ಆಂಜನೇಯ ಸಮುದ್ರೋಲ್ಲಂಘನ ಮಾಡುವುದು (ಓಕುಳಿಯಾಡುವುದು) ರಾಮ ಕಾಡಿನಲ್ಲಿ ಬೇಟೆಗೆ ಹೋಗುವುದು (ಇಂದಿನ ಬೇಟೆಗೆ ಹೋಗುವ ಪದ್ಧತಿ) ರಾಮ ಸೀತೆಯರ ಮಾತುಕತೆ ಸರಸ ಸಲ್ಲಾಪ (ಕಡುಬಿನ ಕಾಳಗ) ಇವುಗಳನ್ನೆಲ್ಲ ನಾವು ಇಂದು ಇಂತಹ ಆಚರಣೆಗಳ ಮುಖಾಂತರ ಪ್ರಮಾಣಿಕರಿಸಬೇಕಾಗಿದೆ.

## ೪. ಜೀವನಾವರ್ತನದ ಆಚರಣೆಗಳು

### ಹುಟ್ಟು ಅಥವಾ ಜನನದ ಸಂದರ್ಭ

ಕೋಗಳಿ ಗ್ರಾಮದಲ್ಲಿ ಯಾವ ಸಮುದಾಯದವರ ಮನೆಯಲ್ಲಿಯೇ ಆಗಲಿ ಮಗು ಹುಟ್ಟಿದರೆ ತಿಂಗಳು ತುಂಬುವುದರೊಳಗೆ ಆಂಜನೇಯನ ದೇವಸ್ಥಾನಕ್ಕೆ ಕರೆದೊಯ್ದು ಆಂಜನೇಯನ ಮುಂದುಗಡೆ ಉರುಳು ಬಿಟ್ಟು, ಸ್ವಾಮಿಗೆ ಪೂಜೆ ಮಾಡಿಸಿಕೊಂಡು ಬರುವುದು ವಾಡಿಕೆ. ಗುಡಿಯಲ್ಲಿಯೇ ಇರುವ ಗುಂಡು ಬರ್ಮಪ್ಪನಿಗೆ ಉರಕಡ್ಲಿ, ಮಂಡಾಳು, ಸಕ್ಕರೆ ನೈವೇದ್ಯ ಮಾಡಿ ಮನೆಗೆ ಬಂದು ಓಣಿಯಲ್ಲಿ ಎಲ್ಲರಿಗೂ ಪ್ರಸಾದ ಕೊಡುವುದು ಕೂಡ ಅನಾದಿಕಾಲದಿಂದಲೂ ನಡೆಯಿಸಿಕೊಂಡು ಬಂದ ಪದ್ಧತಿ. ಕಾರಣ ಮಕ್ಕಳಿಗೆ ಬರುವ ರೋಗ ರುಜಿನಗಳನ್ನು ಗ್ರಾಮದ ದೇವರಾದ ಹನುಮನು ದೂರ ಮಾಡುತ್ತಾನೆ ಎನ್ನುವುದು ಅವರ ನಂಬಿಕೆ. ಹಾಗೆಯೇ ಆಂಜನೇಯನ ಗುಡಿಯ ಒಂದು ಗೋಡೆಯ ಮಾಡಿನಲ್ಲಿರುವ ಗುಂಡು ಬರ್ಮಪ್ಪನಿಗೆ ಪ್ರಸಾದವನ್ನು ನೈವೇದ್ಯ ಮಾಡಿ ಅಲ್ಲಿರುವ ಹುಡುಗರಿಗೆ ವಿತರಣೆ ಮಾಡಿದರೆ ಮಕ್ಕಳು ಅಳುವುದಿಲ್ಲವಂತೆ. ಹಾಗೆಯೇ ಬಾಣಂತಿಯು ಕೂಡ ಹೆರಿಗೆಯಾಗಿ ತಿಂಗಳೊಳಗೆ ದೇವಸ್ಥಾನಕ್ಕೆ ಹೋಗಿ ಬಂದ ನಂತರವೇ ಯಾವುದೇ ಕೆಲಸ ಕಾರ್ಯಗಳನ್ನು ಮಾಡುವುದು ಪದ್ಧತಿ.



### ನಾಮಕರಣ

ಕೋಗಳಿಯಿಂದ ಸ್ತ್ರೀಯರು ಬಾಣಂತಿತನಕ್ಕೆಂದು ತವರು ಮನೆಗೆ ಹೋದವರು ಮಗು ಜನಿಸಿ ಮೂರು ತಿಂಗಳೊ ಅಥವಾ ಐದು ತಿಂಗಳಲ್ಲಿ ಪುನಃ ಕೋಗಳಿಯ ಮಗುವಿನ ತಂದೆ ಮನೆಯಲ್ಲಿ ನಾಮಕರಣ ಮಾಡಿಕೊಳ್ಳಲು ಬಂದಾಗ ಮೊದಲು ಬರುವುದೇ ಊರಿನ ಆಂಜನೇಯನ ದೇವಸ್ಥಾನಕ್ಕೆ. ಅಲ್ಲಿಂದ ಆಯಾ ಮನೆಯವರು ವಾದ್ಯಗಳ ಮುಖಾಂತರ ಕಳಸವನ್ನು ತೆಗೆದುಕೊಂಡು ಆಂಜನೇಯನ ಸನ್ನಿಧಿಗೆ ಬಂದು ಕಾಯಿ ಒಡೆಸಿಕೊಂಡು ಪೂಜೆ ಮಾಡಿಸಿದ ನಂತರವೇ ತಮ್ಮ ಮನೆಗೆ ಕರೆದುಕೊಂಡು ಹೋಗಿ ನಾಮಕರಣ ಮಾಡುತ್ತಾರೆ. ಮಗುವಿಗೆ ಮೊದಲು ಆಂಜನೇಯನ ಹೆಸರು ಕರೆದ ನಂತರವೇ ತಮಗೆ ಇಷ್ಟವಾದ ಪ್ರೀತಿಯ ಹೆಸರನ್ನು ಇಡುತ್ತಾರೆ.

### ಮುದ್ರೆ ಹಾಕುವ ಸಂದರ್ಭ

ಕೋಗಳಿ ಗ್ರಾಮದಲ್ಲಿ ನಾಯಕ ಜನಾಂಗದ ಸಮೂದಾಯದಲ್ಲಿ ಮುದ್ರೆಯಾಕಿಸುವ ಸಂಪ್ರದಾಯವೊಂದು ಪ್ರಚಲಿತದಲ್ಲಿದೆ. ಹಿಂದಕ್ಕೆ ಈ ಜನಾಂಗದ ಸ್ತ್ರೀಪುರುಷರಿಗೂ ಮುದ್ರೆಯಾಕುವ ಪದ್ಧತಿಯು ಜಾರಿಯಲ್ಲಿತ್ತು. ಆದರೆ ಈಗ ಅದು ಕೇವಲ ಪುರುಷರಿಗಷ್ಟೇ ಸೀಮಿತಗೊಂಡಿದೆ. ಮುದ್ರೆಯಾಕಿಸಿಕೊಳ್ಳುವುದೆಂದರೆ ಆಂಜನೇಯನಲ್ಲಿ ದಾಸನಾಗುವುದು. ಅಂದಿನಿಂದ ಆ ವ್ಯಕ್ತಿಗೆ ಅರ್ಧ ಮದುವೆಯಾದ ಹಾಗೆಯೆ. ಆತ ಎಲ್ಲಾ ಶುಭ ಕಾರ್ಯಗಳಲ್ಲಿ ಭಾಗಿಯಾಗಬಹುದು.

ಮುದ್ರೆಯಾಕಿಸಿಕೊಳ್ಳುವವರ ಮನೆಯಿಂದ ಹೊಸ ಮೊರದಲ್ಲಿ ಉಲುಪಿಯನ್ನು ಅಂದರೆ ಅಕ್ಕಿ, ಬೆಲ್ಲ, ಬೇಳೆ, ಗೋದಿ ಹಿಟ್ಟು, ತೆಂಗಿನಕಾಯಿ, ದಕ್ಷಿಣೆಯನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಬಂದು ಅರ್ಚಕನಿಗೆ ಮೊದಲೇ ತಿಳಿಸಿದಂತೆ ಮುದ್ರೆಯನ್ನು ಹಾಕಲು ಸೂಚಿಸುತ್ತಾರೆ. ಅಲ್ಲಿ ಅರ್ಚಕನು ಪಂಚಕಳಸವನ್ನು ಊಡಿ, ಗೋಪಾಳ, ಬೆತ್ತ, ಶಂಕು, ಜಾಗಟೆಯನ್ನು ಪೂಜೆ ಮಾಡಿ, ಮಡಿ ಮೈಲಿಗೆಯಿಂದ ಮುದ್ರೆಯಾಕಿಸಿಕೊಳ್ಳಲು ಬಂದಂತಹ ವ್ಯಕ್ತಿಯನ್ನು ಮುಂದೆ ಕೂಡಿಸಿಕೊಂಡು ಆಂಜನೇಯನನ್ನು ಪೂಜೆ ಮಾಡಿ, ಒಂದು ಹಿತ್ತಾಳೆಯ ತಟ್ಟೆಯೊಳಗೆ ಬೆಂಕಿಯನ್ನು ಮಾಡಿ, ಒಂದು ಶಂಖ, ಇನ್ನೊಂದು ಚಕ್ರದ ಗುರುತಿರುವ ಬಿಲ್ಲೆಗಳನ್ನು ಕೆಂಪಗಾಗುವಂತೆ ಕಾಯಿಸಿ ಆ ವ್ಯಕ್ತಿಯ ಎರಡು ರಟ್ಟೆಗಳಿಗೆ ಒತ್ತುತ್ತಾನೆ. ಇದನ್ನೆ ಮುದ್ರಾಧಾರಣೆ ಎಂದು ಕರೆಯುತ್ತಾರೆ. ದೇಹ ಶುದ್ಧಿಗಾಗಿ ಮತ್ತು ಮನಸ್ಸು ಶುದ್ಧಿಗಾಗಿ ದೈವದ ಸೇವೆಗಾಗಿ ಈ ರೀತಿಯ ಮುದ್ರೆಯನ್ನು ಮತಾಚಾರ್ಯರಿಂದ ಹಾಕಿಸಿಕೊಳ್ಳುವುದು ರೂಢಿಯಾಗಿ ಬಂದಿದೆ. ಈ ರೀತಿ ಮುದ್ರಾಧಾರಣೆಯನ್ನು ಮಾಡಿಕೊಳ್ಳುವವರು ಪಂಚಕಳಸಕ್ಕೂ ದಕ್ಷಿಣೆಯ ಹಣವನ್ನು ಕೊಡಬೇಕು. (೧೧ರೂ) ಒಂದು ತಳವಾರನಿಗೆ, ಇನ್ನೊಂದು ಕೊಂಡಿಕಾರನಿಗೆ, ಒಂದು ಆಯಕಾರನಿಗೆ, ಇನ್ನೊಂದು ಅರ್ಚಕನಿಗೆ, ಇನೊಂದು ಆಂಜನೇಯ ಸ್ವಾಮಿಗೆ ಹೀಗೆ ಕಳಸಕ್ಕೆ ಇಟ್ಟ ದಕ್ಷಿಣೆಯನ್ನು ಕೊಡುವುದು ರೂಢಿ, ಹಾಗೂ ಮುದ್ರೆಯೊತ್ತಿಸಿಕೊಂಡವರಿಗೆ ಮತಾಚಾರ್ಯರು ನೀತಿ ಭೋದನೆಯನ್ನು ಮಾಡುತ್ತಾರೆ. ಬಿಸಿಲಲ್ಲಿ ನಿಂತವರನ್ನು ನೆರಳಿಗೆ ಕರೆಯವುದು, ಬಾಯಾರಿ ಬಂದವರಿಗೆ ನೀರುಕೊಡುವುದು, ಹಸಿದವರಿಗೆ ಅನ್ನವನ್ನು ಇಕ್ಕುವುದು, ಊರಿನಲ್ಲಿ ಸಾವು ಸಂಭವಿಸಿದರೆ ಅಂತ್ಯಕ್ರಿಯೆಯಾಗುವವರೆಗೂ ನಿರಾಹಾರಿಗಳಾಗಿರುವುದು, ಎಲ್ಲಾ ದೇವತಾ ಕಾರ್ಯಗಳಲ್ಲಿ ಭಾಗಿಯಾಗುವುದು ಮುಂತಾದ ವಿಷಯಗಳ ಕುರಿತು ಭೋಧಿಸಲಾಗುತ್ತದೆ. ಇದೆಲ್ಲದರ ಉದ್ದೇಶ ಒಬ್ಬ ವ್ಯಕ್ತಿ ಮುದ್ರೆಯಾಕಿಸಿಕೊಳ್ಳುವುದರ ಮುಖಾಂತರ ಸಮಾಜದೊಳಗೆ ಒಳ್ಳೆಯ ಕೆಲಸಗಳನ್ನು ಮಾಡುತ್ತಾ ಸಮಜಸೇವೆಗಾಗಿ ಭದ್ದವಾಗುವುದೆಂದು ತೋರುತ್ತದೆ. ಆ ದಿನ ಮುದ್ರೆಯಾಕಿಸಿಕೊಂಡ ದಾಸಪ್ಪಂದಿರು ಬಿದಿರಿನ ಅಥವಾ ತಾಮ್ರದ ಗೋಪಾಳ, ಬೆತ್ತ ತೆಗೆದುಕೊಂಡು ಊರಾಡಲು ಹೋಗಿ ಬಿಕ್ಷೆ ಬೇಡಿ ಬರಬೇಕು. ಹಾಗೂ ಹಬ್ಬ ಹರಿದಿನ ಮತ್ತು ಶನಿವಾರದ ದಿನ ಬಿಕ್ಷೆ ಬೇಡಿ ಬರುವುದು ವಾಡಿಕೆ.

**ಮದುವೆ ಸಂದರ್ಭ**

ಮದುವೆಗಳು ಸಮಾನ್ಯವಾಗಿ ಗಂಡಿನ ಮನೆಯಲ್ಲಿಯೇ ಮೂರು ದಿನಗಳ ಕಾಲ ನಡೆಯುವುದು ಹೆಚ್ಚು. ಮೊಲನೆಯ ದಿನ ಚಪ್ಪರದ ಶಾಸ್ತ್ರ. ಆದಿನ ಚಪ್ಪರವನ್ನು ಅಲಂಕರಿಸುತ್ತಾರೆ. ಚಪ್ಪರದ ಕಪಿಯನ್ನು ತಂದು (ಬಿದಿರಿನ ಕೋಲು) ಹಸೆಯನ್ನು (ಪೀಠವನ್ನು) ಸಿದ್ಧಪಡಿಸುತ್ತಾರೆ. ಕಳಸದ ಪೂಜೆ ಪೂರೈಸಿ ಗಂಡಿಗೆ ಶಾಸ್ತ್ರದ ನೀರನ್ನು ಆಂಜನೇಯನ ಗುಡಿಯಲ್ಲಿ ಹಾಕಿ, ಹರಿಷಣ ಹಚ್ಚಿ ಮದುಮಗನನ್ನು ಅಲ್ಲಿಯೇ ಮಾಡಿಕೊಂಡು ಬರುವುದು ರೂಢಿ. ಅದೇದಿನ ಹೆಣ್ಣಿನ ಮನೆಯಲ್ಲಿ ಶಾಸ್ತ್ರದ ನೀರು ಹಾಕಿ ಬಳೆ ತೊಡಿಸಿಕೊಂಡು ಸಂಜೆ ಗಂಡಿನ ಮನೆಗೆ ದಿಬ್ಬಣ ಹೊರಡುತ್ತದೆ. ಹೀಗೆ ಹೊರಟು ಬಂದ ದಿಬ್ಬಣವು ಆಂಜನೇಯನ ದೇವಸ್ಥಾನದಲ್ಲಿ ಬಂದಿಳಿದು ತಂಗಿರುತ್ತಾರೆ. ಆಗ ಗಂಡಿನ ಕಡೆಯವರು ಎದುರುಗೊಳ್ಳುವುದಕ್ಕಾಗಿ ಊರಿನ ಮುತ್ತೈದೆಯರು

ಕಳಸ ತೆಗೆದುಕೊಂಡು ವಾದ್ಯಗಳ ಮುಖಾಂತರ ಬಂದು ಎದುರುಗೊಳ್ಳುತ್ತಾರೆ. ಪರಸ್ಪರ ಹೆಣ್ಣಿನವರಿಗೂ ಮತ್ತು ಗಂಡಿನವರಿಗೆ ಆಂಜನೇಯನ ದೇವಸ್ಥಾನದಲ್ಲಿಯೇ ಮೊದಲ ಬೇಟಿಯಾಗುತ್ತದೆ. ಮಾರನೆಯ ದಿನ ಧಾರೆಯಿರುತ್ತದೆ. ಆದಿನ ಗಂಡನ್ನು ಧಾರೆ ಎತ್ತು ಎಂದು ಮೆರವಣಿಗೆಯನ್ನು ಮಾಡಿಕೊಂಡು ಬಂದು ಆಂಜನೇಯನ ದರ್ಶನ ಮಾಡಿಕೊಂಡು (ಕಾಶಿಯಾತ್ರೆಯ ಸಂಕೇತ) ಹೋದ ಮೇಲೆ ಹೆಣ್ಣಿಗೆ ತಾಳಿ ಕಟ್ಟುವ ಶಾಸ್ತ್ರವನ್ನು ಮಾಡುತ್ತಾರೆ. ನಂತರ ವಧುವರರು ಆಂಜನೇಯ ಸ್ವಾಮಿಯ ದರ್ಶನ ಪಡೆದು ಮನೆಗೆ ಮರಳುತ್ತಾರೆ. ಇದೆಲ್ಲದರ ಹಿನ್ನೆಲೆಯಲ್ಲಿ ಆಂಜನೇಯನಿಗೆ ಇಷ್ಟೊಂದು ಮಹತ್ವವನ್ನು ನಮ್ಮ ಜನಪದರು ಕೊಡುವುದನ್ನು ನೋಡಿದರೆ, ಆತ ಕಲ್ಮಶವಿಲ್ಲದ ರಾಮಹೃದಯಿ ಶ್ರೀರಾಮನ ಧೂತ. ಕಾರಣ ಎಲ್ಲಾ ಶುಭಕಾರ್ಯಗಳಿಗೆ ಮುನ್ನ ಆತನ ದರ್ಶನವನ್ನು ಪಡೆದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಇವರಲ್ಲಿ ಮನೆ ಮಾಡಿದೆ.

ಇನ್ನು ಕಂಡ ದೇವರಿಗೆ ಕೈಮುಗಿದರೂ ಗಂಡನ ಮನೆಗೆ ಹೋಗುವುದು ತಪ್ಪದು ಎನ್ನುವ ನಾಣ್ನುಡಿ ನಮ್ಮಲ್ಲಿದೆ. ಆದರೂ ಹೊಸದಾಗಿ ಗಂಡನ ಮನೆಗೆ ಹೋಗುವ ಹೆಣ್ಣು ಉಡಿ ಅಕ್ಕಿ ಹಾಕಿಕೊಂಡು ಬಂದು ಆಂಜನೇಯನ ದರ್ಶನ ಪಡೆದೆ ಗಂಡನ ಹೋಗುವುದು ಕೋಗಳಿಯಲ್ಲಿ ಒಂದು ಸಂಪ್ರದಾಯವಾಗಿ ಬೆಳೆದು ಕೊಂಡು ಬಂದಿದೆ. ಯಾವ ಜನಾಂಗದವರೇ ಆಗಲಿ ಮತ–ಭೇದವನ್ನು ಮರೆತು ಈ ರೀತಿ ನಡೆದು ಕೊಳ್ಳುವುದು ಒಂದು ವಿಶೇಷ.

**ಸೀಮಂತದ ಸಂದರ್ಭ**

ಚೊಚ್ಚಿಲ ಬಸಿರಿಗೆ ಮಾಡುವ ಸಂಸ್ಕಾರಗಳಲ್ಲಿ ಒಂದು ರೀತಿಯ ಪದ್ಧತಿ ಈ ಸೀಮಂತ. ಸೀಮಂತ ಮಾಡಿಸಿಕೊಳ್ಳುವ ಸೀಮಂತಿನಿಯನ್ನು ಅಂದು ಹಸಿರು ಬಳೆ ತೊಡಿಸಿ, ಹೊಸ ಸೀರೆಯನ್ನು ಉಡಿಸಿಕೊಂಡು ಆಂಜನೇಯನ ದೇವಸ್ಥಾನಕ್ಕೆ ಬಂದು ಕಳಶ ವಾದ್ಯಗಳ ಮುಖಾಂತರ ಆಕೆಯನ್ನು ಕರೆತಂದು ಆಂಜನೇಯನಿಗೆ ಪೂಜೆ ಮಾಡಿಸಿಕೊಂಡು ಹೋದ ಮೇಲೆ ಮನೆಯಲ್ಲಿ ಆಕೆಗೆ ಸೀಮಂತ ಕಾರ್ಯ ಮಾಡುವುದು ಕೂಡ ಕೋಗಳಿಯಲ್ಲಿ ಹಳೆಯ ಕಾಲದಿಂದ ನಡೆದುಕೊಂಡು ಬಂದ ಸಂಪ್ರದಾಯಗಳಲ್ಲಿ ಒಂದಾಗಿದೆ. ಇದರಿಂದ ಮುಂದೆ ಹುಟ್ಟಲಿರುವ ಮಗುವಿಗೆ ಯಾವುದೇ ತೊಂದರೆಯಾಗದಿರಲಿ ಎನ್ನುವುದು ಇವರ ಉದ್ದೇಶವಿರಬಹುದು.

**ಸಾವು**

ಹುಟ್ಟು, ಮದುವೆ, ಸಾವುಗಳು ಮನುಷ್ಯನ ಜೀವನದ ಪ್ರಮುಖ ಸೋಪಾನಗಳು. ಅವನು ಸತ್ತ ನಂತರ ಪ್ರೇತವಾಗುಳಿಯುತ್ತಾನೆ. ಅಥವಾ ಮತ್ತೆ ಹುಟ್ಟಿ ಬರುತ್ತಾನೆ. ಇಲ್ಲವೆ ಸ್ವರ್ಗದಲ್ಲಿದ್ದು ನಮ್ಮನ್ನೆಲ್ಲ ನೋಡಿ ನಮ್ಮ ಯೋಗಕ್ಷೇಮವನ್ನು ವಿಚಾರಿಸುತ್ತಾನೆ ಎಂಬ ಇನ್ನಿತರ ನಂಬಿಕೆಗಳು ಅನೇಕ ಮರಣೋತ್ತರ ಸಂಸ್ಕಾರಗಳಿಗೆ ಪ್ರೇರಕವಾಗುತ್ತವೆ. ಈ ಸಂಸ್ಕಾರಗಳು ಸಹ ಜನಾಂಗದಿಂದ ಜನಾಂಗಕ್ಕೆ ಫಿರ್ಕಾದಿಂದ ಫಿರ್ಕಾಕ್ಕೆ ಬದಲಾವಣೆಯನ್ನು ಹೊಂದಿರುತ್ತವೆ. ಕೋಗಳಿಯಲ್ಲಿಯೂ

ಕೂಡ ಯಾವ ಸಮೂದಾಯದವರ ಮನೆಯಲ್ಲಿಯೇ ಆಗಲಿ ಸಾವು ಸಂಭವಿಸಿದರೆ ಸತ್ತಿರುವ ಹೆಣವನ್ನು ಸ್ಮಶಾನಕ್ಕೆ ಒಯ್ಯುವಾಗ ಆಂಜನೇಯನ ದೇವಸ್ಥಾನದ ಮುಂದುಗಡೆಯಿಂದಲೇ ಹೋಗಬೇಕು. ನಂತರ ಊರಾಚೆ ಅಗಸಿಯಲ್ಲಿ ಹೆಣವನ್ನು ಪೂಜೆ ಮಾಡಿ ಪುನಃ ಎಡಕ್ಕೆ ಹೊತ್ತುಕೊಂಡವರು ಬಲಕ್ಕೆ ಬಲಕ್ಕೆ ಹೊತ್ತುಕೊಂಡವರು ಎಡಕ್ಕೆ ಬದಲಾಯಿಸಿ ಹೆಣವನ್ನು ಹೊತ್ತುಕೊಂಡು ಹೋಗುತ್ತಾರೆ. ಸ್ಮಶಾನಕ್ಕೆ ಹೋಗಿ ಹೆಣವನ್ನು ಸಮಾದಿ ಮಾಡಿ ಬಂದವರೆಲ್ಲರೂ ವಾಪಾಸ್ಸು ಬರುವಾಗ ಹತ್ತಿರದ ಕೊಳದಲ್ಲಿ ಅಥವಾ ಬಾವಿಯಲ್ಲಿ ನೀರು ಮುಟ್ಟಬೇಕು. ಮುಟ್ಟುವುದೆಂದರೆ ತಲೆಯ ಮೇಲೆ ನೀರು ಸಿಂಪಡಿಸಿಕೊಳ್ಳುವುದೆಂದರ್ಥ. ಕೊಳ ಅಥವಾ ಬಾವಿಯ ಬಳಿಯೇ ಎಲೆ ಅಡಿಕೆ ವಿತರಣೆಯಾಗುತ್ತದೆ. ಇಲ್ಲವೆ ಮಂಡಕ್ಕಿಯನ್ನು ಬಾಯಲ್ಲಿ ಹಾಕಿಕೊಂಡು ಹೊರ ಹಾಕುವುದು ರೂಢಿ. ಇನ್ನು ಕೆಲವರು ಬಾವಿ, ಕೊಳದಲ್ಲಿಯೇ ಸ್ನಾನವನ್ನು ಮುಗಿಸಿಕೊಂಡು ಊರಿಗೆ ಬಂದು ಆಂಜನೇಯನ ದರ್ಶನ ಪಡೆದು ತಮ್ಮ ತಮ್ಮ ಊರಿಗೆ ಹೋಗುತ್ತಾರೆ. ಮತ್ತೇ ಕೆಲವರು ಮನೆಗೆ ಬಂದು ಸ್ನಾನಗಳನ್ನು ಮಾಡಿ ಆಂಜನೇಯನ ದೇವಸ್ಥಾನಕ್ಕೆ ಬಂದು ಕೈಮುಗಿದು ಹೋಗುತ್ತಾರೆ. ಕಾರಣ ಸ್ಮಶಾನಕ್ಕೆ ಹೋಗಿ ಬಂದವರಿಗೆ ತಗಲಬಹುದಾದ ಭೂತಗಳನ್ನು ಆಂಜನೇಯ ಸ್ವಾಮಿ ತಡೆಯುತ್ತಾನೆ ಎನ್ನುವ ನಂಬಿಕೆ ಇವರದು.

ಅಲ್ಲದೆ ಊರಿನಲ್ಲಿ ಯಾರ ಮನೆಯಲ್ಲಿಯೇ ಆಗಲಿ ಸಾವು ಸಂಭವಿಸಿದರೆ ಆಂಜನೇಯನ ಮುದ್ರೆಯನ್ನು ಹೊತ್ತಿಸಿಕೊಂಡು ದಾಸಪ್ಪಂದಿರು ಆದಿನ ಊಟ ಮಾಡುವಂತಿಲ್ಲ. ಅಂತ್ಯ ಕ್ರಿಯೆಯಾಗುವ ತನಕ ನಿರಾಹಾರಿಗಳಾಗಿದ್ದು ನಂತರ ಲಘು ಉಪಹಾರ ತೆಗೆದುಕೊಳ್ಳುತ್ತಾರೆ. ಹೀಗೆ ಊರಿನಲ್ಲಿ ಯಾವ ಮನೆಯಲ್ಲಾದರೂ ಸಾವು ಸಂಭವಿಸಿದಾಗಲು ಅಂತ್ಯಕ್ರಿಯೆಯು ಮುಗಿದ ನಂತರ ಮನೆಯವರು, ಮನೆಯ ಸುತ್ತಮುತ್ತಲಿನವರು, ಬಂಧು ಬಳಗದವರೆಲ್ಲರೂ ಹಳ್ಳ-ಕೊಳ್ಳ, ಬಾವಿ ಇಲ್ಲವೆ ಮನೆಯಲ್ಲಿಯೇ ಆಗಲಿ ಸ್ನಾನ ಮುಗಿಸಿಕೊಂಡು ಆಂಜನೇಯನ ದರ್ಶನ ಮಾಡಿಕೊಂಡು ಹೋಗುವುದು ರೂಢಿಯಾಗಿದೆ. ಇದೆಲ್ಲವನ್ನು ಅಂದರೆ ಹುಟ್ಟು, ನಾಮಕರಣ, ಮದುವೆ, ಸೀಮಂತ, ಸಾವು ಅಥವಾ ಇನ್ನಿತರೆ ಸಂದರ್ಭಗಳಲ್ಲಿಯೂ ಕೂಡ ಆಂಜನೇಯನನ್ನು ಪೂಜಿಸದೇ ಮುಂದುವರಿಯುವ ಹಾಗಿಲ್ಲ. ಇದೆಲ್ಲದರ ಉದ್ದೇಶ ಯಾವ ರೀತಿಯ ವಿಜ್ಞಗಳು ಅಥವಾ ಊರಿಗೆ ಮಾರಕ ಕಾಯಿಲೆಗಳು ಬಾರದಿರಲಿ ಎನ್ನುವುದಾಗಿರಬಹುದು. ಹಾಗೆಯೇ ಮದುವೆಯಾಗುವ ವಧುವರರಿಗೆ ಆಂಜನೇಯನ ಆಶೀರ್ವಾದ ಸಿಗಲಿ ಎಂದು, ಸೀಮಂತದ ಸಮಯದಲ್ಲಿ ಹೊಟ್ಟೆಯಲ್ಲಿರುವ ಮಗುವಿಗೆ ಯಾವ ರೋಗ ರುಜಿನ ಬಾರದಿರುವಂತೆ ಆಂಜನೇಯನು ತಲೆ ಕಾಯುವನೆಂಬ ನಂಬಿಕೆಯಿಂದ ಆಂಜನೇಯನ್ನು ಪೂಜಿಸುತ್ತಾರೆ.

**೫. ನಂಬಿಕೆಗಳು**

ನಂಬಿಕೆ ಎಂಬುದು ನಾಮಪದವಾಗಿದೆ. ನಂಬು ಎನ್ನುವ ಧಾತುವಿಗೆ ಇಕೆ ಎಂಬ ಪ್ರತ್ಯಯ ಸೇರಿ ಈ ಪದ ಉಂಟಾಗಿದೆ. ಒಂದು ವಸ್ತುವಿನ ಅಥವಾ ವಿಷಯದ ಮೇಲೆ ವಿಶ್ವಾಸವಿಟ್ಟು ಆಬಗೆಗೆ ಹೇಳುವ ಮಾತನ್ನು ನಂಬಿಕೆ ಎನ್ನಬಹುದು. ಸತ್ಯ ಸಂಗತಿಯಾಗಿರುವ

ವಾಸ್ತವಿಕತೆಯು ನಂಬಿಕೆ ಎನಿಸುವುದಿಲ್ಲ. ಎಂಬ ಮಾತುಗಳಲ್ಲಿ ನಂಬಿಕೆಯ ಬಗೆಗಿನ ಸಂಪೂರ್ಣ ವಿವಿರ ಸೇರಿಕೊಂಡಿದೆ. ಈ ನಂಬಿಕೆ ಬಗ್ಗೆ ಪುರುಷೋತ್ತಮ ಬಿಳಿಮನೆಯವರು ವ್ಯಕ್ತಿ ಮತ್ತು ಸಮಾಜವು ಪರಂಪರಾಗತವಾಗಿ ಒಪ್ಪಿಕೊಂಡು ಅನುಸರಿಸುತ್ತಾ ಬರುತ್ತಿರುವ ವರ್ತನೆಗಳನ್ನು ನಾವು ನಂಬಿಕೆಗಳೆಂದು ಕರೆಯುತ್ತೇವೆ. ವೈಜ್ಞಾನಿಕ ದೃಷ್ಟಿಗಿಂತ ಭಾವುಕ ದೃಷ್ಟಿ ಇಲ್ಲಿ ಹೆಚ್ಚು ಇರುವಲ್ಲಿ ನಂಬಿಕೆಗಳು ಪ್ರಭಲವಾಗಿರುತ್ತವೆ. ಒಟ್ಟಾರೆ ಈ ನಂಬಿಕೆಯು ವ್ಯಕ್ತಿಯ ಮನಸ್ಸಿನ ಸ್ಥಿತಿಗೆ ಸಂಬಂಧಿಸಿದ್ದಾಗಿದೆ.

ಜನಪದ ನಂಬಿಕೆಯು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ಹೀಗೆ ನಂಬಿಕೆಯೊಂದು ಅಂಗೀಕೃತವಾಗುವಲ್ಲಿ ಪುನರಾವರ್ತನೆ ಹಾಗೂ ಸಮೂಹಿಕ ನಿರೀಕ್ಷೆಗಳು ಮುಖ್ಯವಾಗಿರುತ್ತವೆ. ನಂಬಿಕೆಯು ಜನಪದರ ಜೀವನಾನುಭವದ ಉತ್ಪನ್ನವಾಗಿದೆ. ಹೀಗೆ ಮಾನವ ಬದುಕಿಗೂ, ನಂಬಿಕೆಗೂ ಬಿಡಿಸಲಾಗದ ಸಂಬಂಧವಿದೆ.

ಮೂಲತಃ ಕಾಲ್ಪನಿಕ ಆಲೋಚನೆಯೊಂದು ವೈಯುಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ಸಮೂಹದಲ್ಲಿ ಸಾಮೂಹಿಕ ಮಾನ್ಯತೆಯನ್ನು ಪಡೆದುಕೊಂಡಾಗ ಅದು ನಂಬಿಕೆಯಾಗುತ್ತದೆ. ಆಷಾಡದಲ್ಲಿ ಅತ್ತೆ ಸೊಸೆಯಂದಿರು ಒಂದೇ ಬಾಗಿಲಲ್ಲಿ ನಡೆದಾಡಬಾರದು, ಸಂಜೆ ಹೊತ್ತಲ್ಲಿ ಕಸಗುಡಿಸಿ ಹೊರ ಹಾಕಿದರೆ ಲಕ್ಷ್ಮಿ ಹೊರ ಹೋಗುತ್ತಾಳೆ. ತೆಂಗಿನ ಕಾಯಿಯನ್ನು ತುಳಿಯಬಾರದು ಇಂತಹ ಹಲವಾರು ನಂಬಿಕೆಗಳು ಜನಪದರ ನಡುವೆ ಪ್ರಚಲಿತದಲ್ಲಿರುತ್ತವೆ. ಹಾಗೆಯೇ ಆಂಜನೇಯನಿಗೆ ಸಂಬಂಧಿಸಿದಂತೆ ಈ ರೀತಿಯ ನಂಬಿಕೆಗಳು ಆ ಜನಪದರಲ್ಲಿ ಮನೆಮಾಡಿಕೊಂಡಿವೆ. ಕೋಗಳಿಯಲ್ಲಿ ಬಹಳ ದಿನಗಳ ಕಾಲ ಮಳೆಯು ಬಾರದಿದ್ದಾಗ ಊರಿನವರೆಲ್ಲರೂ ಕೂಡಿ ಇನ್ನು ಒಂದು ವಾರದೊಳಗೆ ಊರಿಗೆ ಮಳೆಯು ಬರುವಂತೆ ಬಲಗಡೆಯ ಮಗ್ಗುಲಿನ ಹೂವನ್ನು ಕೊಡು, ಮಳೆಯು ಬರುವುದಿಲ್ಲವೆಂದಾದರೆ ಎಡದ ಮಗ್ಗುಲಿನ ಹೂವನ್ನು ಕೊಡು ಎಂದು ದೇವಸ್ಥಾನಕ್ಕೆ ಮಡಿಮೈಲಿಗೆಯಿಂದ ಬಂದು ಆಂಜನೇಯನನ್ನು ಪೂಜಿಸಿ ಬೇಡಿಕೊಂಡು ಕುಳಿತಾಗ ಸುಮಾರು ಹೊತ್ತಿನ ನಂತರ ಸ್ವಾಮಿಯು ಬಲ ಮಗ್ಗುಲಿನ ಹೂವನ್ನು ಕೊಟ್ಟನು. ಕಾರಣ ಒಂದು ವಾರದೊಳಗೆ ಗ್ರಾಮಕ್ಕೆ ಧಾರಾಳವಾಗಿ ಮಳೆ ಸುರಿಯಿತು. ಹೀಗೆ ಆಂಜನೇಯನು ಭಕ್ತಿಯಿಂದ ಬೇಡಿಕೊಂಡರೆ ಅಂದು ಕೊಂಡ ಕೆಲಸ ಆಗುತ್ತದೆ ಎನ್ನುವ ನಂಬಿಕೆ ಇಂತಹ ಒಂದು ನಂಬಿಕೆ ಒಬ್ಬನಿಗೆ ನಂಬಿಕೆಯಾಗಿದ್ದರೆ, ಇನ್ನೊಬ್ಬರಿಗೆ ಅದು ಮೂಢನಂಬಿಕೆ ಎನಿಸಬಹುದು. ಆಂಜನೇಯ ಹೂ ಕೊಡುವುದಕ್ಕೂ ಮಳೆ ಬರುವುದಕ್ಕೂ ಏನು ಸಂಬಂಧವಿಲ್ಲ ಎಂದು ಕೆಲವರು ಅದು ಕಾಕತಾಳೀಯ ಎಂದರೂ ನಂಬಲೇ ಬೇಕಾದ ಸತ್ಯವೆನಿಸುತ್ತದೆ ಈ ನಂಬಿಕೆ.

ಮಕ್ಕಳಾಗದವರು ಬೆಳಗಿನ ಜಾವ ಯಾರಿಗೂ ಕಾಣದಂತೆ ಸ್ನಾನಾದಿಗಳನ್ನು ಮಾಡಿ ಅರೆ ಬೆತ್ತಲೆಯಲ್ಲಿ ಬಂದು ಪೂಜಿಸಿದರೆ ಸಂತಾನ ಫಲವನ್ನು ಕೊಡುತ್ತಾನೆ ಕೋಗಳಿ ಹನುಮ ಎನ್ನುವುದು ಒಂದು ನಂಬಿಕೆ. ಅದರಂತೆಯೇ ನಾನು ಸಂದರ್ಶನಕ್ಕೆ ಹೋದ ಸಮಯದಲ್ಲಿ

ಬಹಳ ದಿನಗಳ ಕಾಲ ಮಕ್ಕಳಾಗದ ಒಬ್ಬ ಸ್ತ್ರೀಯು ಈ ನಂಬಿಕೆಯನ್ನು ಸಮರ್ಥಿಸಿಕೊಂಡಿದ್ದು ಹೀಗೆ. ದಿನಾಲು ನಾನು ಆಂಜನೇಯನ ದೇವಸ್ಥಾನಕ್ಕೆ ಬೆಳಗಿನ ಜಾವ ಸ್ನಾನಾದಿಗಳನ್ನು ಮಾಡಿ ಯಾರು ಕಾಣದ ಹಾಗೆ ಬಂದು ಪೂಜಿಸುತ್ತಿದ್ದೆ. ಇದ್ದಕ್ಕಿದ್ದ ಹಾಗೆ ಒಂದು ದಿನ ದೇವಸ್ಥಾನದೊಳಗೆ ಯಾರು ಇರಲಿಲ್ಲವಾದರೂ ಗಂಟೆಗಳು ಬಾರಿಸಿದವು. ಸ್ವಲ್ಪ ಭಯವಾಯಿತಾದರೂ ಪೂಜೆ ಮಾಡಿಕೊಂಡು ಮನೆಗೆ ಬಂದೆ. ಇನ್ನು ಬೆಳಗಾಗಿಲ್ಲದ್ದರಿಂದ ಪುನಃ ಮಲಗಿದೆ ಆಗ ಕನಸೊಂದು ಬಿತ್ತು. ಅದರಲ್ಲಿ ನಾನು ಊಟ ಮಾಡುತ್ತಿದ್ದೆ. ನನ್ನ ಜೊತೆಗೆ ಒಂದು ಮಂಗ ಊಟ ಮಾಡಿ ಎದ್ದು ಹೋದಂತೆ ಉಳಿದೆಲ್ಲ ಆಹಾರವನ್ನು ನಾನು ತಿಂದೆ. ಕಾರಣ ಆವಾಗಲೇ ನಾನು ಸಂತಾನ ಪಡೆಯಲು ಸಾಧ್ಯವಾಯ್ತು. ಅಂತೆಯೇ ಭಕ್ತಿಯಿಂದ ಆಂಜನೇಯನನ್ನು ಪೂಜಿಸಿದರೆ ಸಂತಾನಭಾಗ್ಯ ದೊರೆಯುತ್ತದೆ ಎನ್ನುವ ನಂಬಿಕೆಯು ಇದೆ. (ಸುಮಾರು ಜನರ ಅಭಿಪ್ರಾಯವೊಂದೆ). ಕಂಕಣ ಬಲವು ಕೂಡಿ ಬರದ ಕುಮಾರಿಯರು ಆಂಜನೇಯನಿಗೆ ವಾರದ ಶ್ರೇಷ್ಠ ದಿನವಾದ ಶನಿವಾರ ಪೂಜಿಸಿ ಉಪವಾಸ ವ್ರತ ಆಚರಿಸಿದರೆ ಅವರಿಗೆ ಮದುವೆಯ ಯೋಗ ಬರುತ್ತದೆ ಎನ್ನುವ ನಂಬಿಕೆಯು ಇದೆ.

**೬. ಹರಕೆಗಳು**

ಹರಕೆಗಳನ್ನು ಹೊರುವುದರಿಂದ ಚರ್ಮಕ್ಕೆ ಅಂಟಿದ ರೋಗವು ದೂರವಾಗುತ್ತದೆ ಎನ್ನುವ ನಂಬಿಕೆಯು ಇದೆ. ಆಂಜನೇಯನ ತೀರ್ಥದ ನೀರನ್ನು ಕುಡಿಯುವುದರಿಂದ ಉದರ ಕಾಯಿಲೆ ವಾಸಿಯಾಗುತ್ತದೆ ಮತ್ತು ಆದಾರವನ್ನು ತಿನ್ನುವುದರಿಂದ (ಭಸ್ಮ) ಮತ್ತು ಚರ್ಮಕ್ಕೆ ಸವರಿಕೊಳ್ಳುವುದರಿಂದ ಚರ್ಮರೋಗ ನಿವಾರಣೆಯಾಗುತ್ತದೆ ಎನ್ನುವುದು ಕೋಗಳಿಯ ಜನಪದರ ನಂಬಿಕೆ. ಆಂಜನೇಯನ ರಥದ ಗಾಲಿಗಳು ಕಟ್ಟಿಗೆಯವಾಗಿದ್ದು ದುಸ್ತಿತಿಯಲ್ಲಿದ್ದ ಸಮಯದಲ್ಲಿ; ಕೋಗಳಿಯ ಹಿರಿಯರಾದ ದುರ್ಗಸೀಮೆ ಲೋಕಣ್ಣನವರ ತಾಯಿಗೆ ಊದು ಖಾಯಿಲೆ (ಮುಖದ ಬಾವು ಬರುವುದು) ಮತ್ತು ಈತನಿಗೆ ತುಟಿಗಳ ಒಳಭಾಗ ಬಿಳಿಯ ಮಚ್ಚೆ (ತೊನ್ನುರೋಗ) ಕಾಣಿಸಿಕೊಂಡ ಸಮಯದೊಳಗೆ ನಮ್ಮಿಬ್ಬರಿಗೂ ಇರುವ ಕಾಯಿಲೆವಾಸಿಯಾದರೆ ಕಲ್ಲಿನ ಗಾಲಿಗಳನ್ನು (ಚಕ್ರ) ರಥಕ್ಕೆ ಮಾಡಿಸಿಕೊಡುತ್ತೇವೆಂದು ಆಂಜನೆಯನಲ್ಲಿ ಹರಕೆ ಹೊತ್ತು ವಾಸಿಯಾದ ಕಾರಣ ಆಂಜನೇಯನ ರಥಕ್ಕೆ ಕಲ್ಲಿನ ಗಾಲಿಗಳನ್ನು ಮತ್ತು ತೇರು ಎಳೆಯಲು ಬೇಕಾದ ಹಗ್ಗ(ಮಿಣಿ)ವನ್ನು ಮಾಡಿಸಿಕೊಟ್ಟಿದ್ದಾನೆ.

ಬಡಿಗೇರ ಸಮಾಜದವರಾದ ಶಿರಸಪ್ಪ ಆಚಾರಿಯವರಿಗೆ ನಡುವಯಸ್ಸಿನಲ್ಲಿ ಚರ್ಮಕ್ಕೆ ಕುಷ್ಟರೋಗದ ಲಕ್ಷಣಗಳು ಕಂಡು ಬಂದಾಗ ಆಂಜನೆಯನಲ್ಲಿ ಮೊರೆ ಹೋಗಿ ಹರಕೆ ಹೊತ್ತು ನನ್ನ ಕಾಯಿಲೆ ವಾಸಿಯಾದರೆ ನನ್ನ ಜೀವನದ ಅಂತ್ಯದವರೆಗೂ ಆಂಜನೇಯನ ಗುಡಿಯ ಸುತ್ತಲು ಇರುವೆಗೆ ಆಹಾರವಾಗಲೆಂದು ಸಕ್ಕರೆಯನ್ನು ಪ್ರತಿ ಶನಿವಾರದ ದಿನ ಚೆಲ್ಲುತ್ತೇನೆ ಎಂದು ಹರಕೆಯನ್ನು ಹೊತ್ತ ಹಾಗೆ ಆತನ ಖಾಯಿಲೆ ಗುಣವಾಗಿದ್ದಕ್ಕೆ ಇಂದಿಗೂ ಸಕ್ಕರೆಯನ್ನು ಪ್ರತಿಶನಿವಾರ ಇರುವೆಗಳಿಗೆ ವಿತರಿಸುತ್ತಾರೆ. ಹೀಗೆ ಕೋಗಳಿಯ ಆಂಜನೇಯನು ಹತ್ತು

ಹಲವಾರು ನಂಬಿಕೆಗಳನ್ನು ಸತ್ಯವಾಗಿಸಿದಂತಹ ಚಿರಂಜೀವಿ ಈತನಾಗಿದ್ದಾನೆ. ಕಾರಣ ಇಂದಿಗೂ ಈ ಎಲ್ಲಾ ತರಹದ ನಂಬಿಕೆಯ ಅಡಿಯಲ್ಲಿ ಆಂಜನೇಯನನ್ನು ಪೂಜಿಸುವುದು ವಾಡಿಕೆಯಾಗಿದೆ.

ಇಲ್ಲಿನ ಕೃಷಿಕರು ಯಾವ ಬೆಳೆಯನ್ನೆ ಬೆಳೆಯಲಿ ಅದರ ಒಂದಿಷ್ಟು ಭಾಗವನ್ನು ಅಥವಾ ಮೊದಲ ಬೆಳೆಯ ಸ್ವಲ್ಪ ಭಾಗವನ್ನು ಆಂಜನೇಯನಿಗೆ ಅರ್ಪಿಸುವುದು ವಾಡಿಕೆ. ಇದರಿಂದ ಅವರ ಬೆಳೆಯಲ್ಲಿ ಹುಲುಸು ಆಗುತ್ತದೆ (ಹೆಚ್ಚುವರಿ) ಎನ್ನುವ ನಂಬಿಕೆ ಅವರದು. ಯಾರ ಮನೆಯಲ್ಲಿಯೇ ಆಗಲಿ ಹಸು, ಎಮ್ಮೆ, ಕರುವನ್ನು ಹಾಕಿದರೆ ಅವುಗಳ ಮೊದಲ ಹಾಲನ್ನು (ಗಿಣ್ಣದ ಹಾಲನ್ನು) ಆಂಜನೇಯನಿಗೆ ಅರ್ಪಿಸುತ್ತಾರೆ. ಕಾರಣ ನಂತರದ ಹಾಲನ್ನು ಕುಡಿದ ಕರುಗಳು ಮತ್ತು ಉಪಯೋಗಿಸಿದ ಜನರು ಕೂಡ ಆಯುರಾರೋಗ್ಯವನ್ನು ಪಡೆಯುತ್ತಾರೆ ಎನ್ನುವುದು ಕೂಡ ಒಂದು ನಂಬಿಕೆಯಾಗಿದೆ.

ಊರಿನ ಕೃಷಿಕನೊಬ್ಬನು ಹೊಲದಲ್ಲಿ ಹುಣಸೆ ಮರವು ಹಣ್ಣು ಬಿಟ್ಟಿರುವ ಸಮಯದಲ್ಲಿ ಮಂಗಗಳು ಹಣ್ಣನ್ನು ತಿಂದು, ತಿಂದು ಬಿಸಾಕುವುದುನ್ನು ಕಂಡು, ಅವುಗಳನ್ನು ಅಲ್ಲಿಂದ ಓಡಿಸಬೇಕೆಂದು ನಿರ್ಧರಿಸಿ, ಸಿಡಿಮದ್ದನ್ನು ಸಿಡಿಸುವುದರ ಮುಖಾಂತರ ಅವುಗಳನ್ನು ಓಡಿಸುವ ಪ್ರಯತ್ನ ಮಾಡಿದನು. ಆ ಸಮಯದಲ್ಲಿ ಎಲ್ಲಾ ಮಂಗಗಳು ಆ ಸಿಡಿಮದ್ದಿನ ಶಬ್ದಕ್ಕೆ ಬೆದರಿ ಅಂಜಿಕೆಯಿಂದ ಓಡಿ ಹೋದವು. ಆದರೆ ಆತ ಅಷ್ಟಕ್ಕೆ ಸುಮ್ಮನಿರದೆ ಒಂದು ಮಂಗನನ್ನು ಕಟ್ಟಿಗೆಯ ಕೋಲಿನಿಂದ ಹೊಡೆದು ಅರೇ ಪ್ರಜ್ಞಾವಸ್ಥೆಗೆ ಬರುವಂತೆ ಮಾಡಿದ. ಅದು ಸತ್ತು ಹೋಗಿರಬೇಕು ಕೂಡ. ಕಾರಣ ಆತನ ಕಿವಿಗಳು ಅಂದಿನಿಂದ ಕೇಳದಾದವು. ಪಟಾಕಿಯ ಸದ್ದಿನಿಂದ ಆತನ ಕಿವಿಯ ತಮಟೆಗಳು ಹರಿದು ಹೋಗಿ ಕಿವಿ ಕೇಳದೇ ಇರಬೇಕು ಎಂದು ಕೊಂಡಾಗಲು, ಮಂಗಗಳು ಆ ವ್ಯಕ್ತಿಯ ಕನಸಿನೊಳಗೆ ದಿನಾಲು ಬಂದು ಪೀಡಿಸುತ್ತಿದ್ದವು. ಆತ ಕಿವಿಯನ್ನು ಎಲ್ಲಿ ತೋರಿಸಿದರು, ಆಪರೇಷನ್ ಮಾಡಿಸಿದರೂ ಕೇಳಲೇ ಇಲ್ಲ. ನಂತರ ಆಂಜನೇಯನಲ್ಲಿ ಮೊರೆಹೋಗಿ ನನ್ನ ಕಿವಿಗಳು ಕೇಳುವಂತಾದರೆ ಬೆಳ್ಳಿಯ ಮಂಗನನ್ನು ನಿನಗೆ ಅರ್ಪಿಸುತ್ತೇನೆ ಎಂದು ಬೇಡಿಕೊಂಡು ಅಂದಿನಿಂದ ಆತ ದಿನವೂ ಆಂಜನೇಯನ ದೇವಸ್ಥಾನಕ್ಕೆ ಹೋಗಿ ಪೂಜೆ ಸಲ್ಲಿಸಿ ಬರುವುದರಿಂದ, ಬೆಳ್ಳಿಯ ಮಂಗನನ್ನು ಅರ್ಪಿಸಿರುವುದರಿಂದ ಆತನಿಗೆ ಈಗ ಸ್ವಲ್ಪ ಕಿವಿ ಕೇಳುವ ಹಂತಕ್ಕೆ ಬಂದಿದೆ. ಮುಂದುವರೆದಂತೆ ಸಂಪೂರ್ಣ ನಿಚ್ಚಳವಾಗುತ್ತವೆ ಎನ್ನುವ ಆಶಾದಾಯಕ ಸಂಗತಿಯನ್ನು ಹೇಳಿದನು.

ಮಾರುತೆಪ್ಪ – ಕೋಗಳಿ, ವಯಸ್ಸು – ೩೩

ವಿದ್ಯಾಭ್ಯಾಸ– ಪ್ರಾಥಮಿಕ ಹಂತ (ನಾಲ್ಕನೆ ತರಗತಿ)

ತಮ್ಮನ್ನು ದೇವರು ಕಾಪಾಡುತ್ತಾನೆ ಎನ್ನುವ ನಂಬಿಕೆಯು ಮನುಷ್ಯನಿಗೆ ಒಮ್ಮೆ ಬಂತೆಂದರೆ ಅವನು ಆ ದೇವರಿಗೆ ಏನು ಮಾಡಲು ಸಿದ್ಧನಿರುತ್ತಾನೆ. ಕಾರಣ ಹಲವಾರು ರೀತಿಯ ಹರಕೆಗಳನ್ನು ಹೊರುವುದು ಸಂಪ್ರದಾಯ. ಜೀವನದೊಳಗೆ ಕಷ್ಟ ಕಾರ್ಪಣ್ಯಗಳು

ಸಂಭವಿಸಿದಾಗ ಅವುಗಳು ದೂರವಾದರೆ ಈ ರೀತಿಯ ಹರಕೆಯನ್ನು ಸಲ್ಲಿಸುತ್ತೇವೆಂದು ಬೇಡಿಕೊಳ್ಳುವುದುಂಟು.

೧. ಉರುಳು ಸೇವೆ ಮಾಡುವುದು.

೨. ಡೀಡು ನಮಸ್ಕಾರ ಹಾಕುವುದು.

೩. ಕಾಯಿ ಹೊಡೆಸುವುದು.

೪. ದೈವಕ್ಕೆ ಬೆಳ್ಳಿ ಬಂಗಾರದ ಸಾಮಾನುಗಳನ್ನು ಅರ್ಪಿಸುವುದು.

೫. ಉಪವಾಸ ಮಾಡುವುದು.

೬. ಮುದ್ರೆಯಾಕಿಸಿ ಕೊಳ್ಳುವುದು.

೭. ದೈವಕ್ಕೆ ವಿವಿಧ ಬಗೆಯ ಆಯುಧಗಳನ್ನು ಮಾಡಿಸಿಕೊಡುವುದು.

೮. ಎಲೆಪೂಜೆ ಕಟ್ಟಿಸುವುದು.

೯. ಕುಂಕುಮ ಪೂಜೆ ಮಾಡಿಸುವುದು.

೧೦. ಕಾರ್ತಿಕ ಹಚ್ಚುವುದು.

೧೧. ದ್ವಾರಕ್ಕೆ (ಬಾಗಿಲಿಗೆ) ಪ್ರಭಾವಳಿ ಮಾಡಿಸುವುದು.

೧೨. ಮೈಕ್ ಸೆಟ್ ಕೊಡಿಸುವುದು.

೧೩. ಘಂಟೆಗಳನ್ನು ಕೊಡಿಸುವುದು.

೧೪. ಸ್ವಾಮಿಗೆ ಹೂವಿನ ಹಾರ ಮಾಡಿಸುವುದು.

೧೫. ಪರುವು ಮಾಡಿಸುವುದು.

೧೬. ೯ಜನ ದಾಸಪ್ಪರಿಗೆ ದಾಸೋಹ ನೀಡುವುದು.

೧೭. ಪಲ್ಲಕ್ಕಿ ಹೊರುವುದು.

೧೮. ರಥೋತ್ಸವಕ್ಕೆ ಬೇಕಾದ ಸಾಮಾನು ಕೊಡಿಸುವುದು.

೧೯. ರಥಕ್ಕೆ ಪಟಗಳನ್ನು ಕೊಡಿಸುವುದು.

೨೦. ಹೊಂಡಕ್ಕೆ ನೀರು ತುಂಬುವುದು.

೨೧. ಮುಳ್ಳುಪವಾಡದ ಪಾಲಕಿಗೆ ಅಡ್ಡಲಾಗಿ ಬೀಳುವುದು.

೨೨. ೨೧ ಅಥವಾ ೪೧ ದಿನ ತಪ್ಪದೇ ದೇವಸ್ಥಾನಕ್ಕೆ ಬಂದು ದೀಪ ಹಚ್ಚುವುದು.

೨೩. ದೇವಸ್ಥಾನಕ್ಕೆ ಬಣ್ಣ-ಸುಣ್ಣ ಬಳಿಸುವುದು.

೨೪. ದೀಪಗಳನ್ನು ಒಪ್ಪಿಸುವುದು.

೨೫. ಭಜನಾ ಸಾಮಾನು ಕೊಡಿಸುವುದು.

ಹೀಗೆ ನಾನಾ ರೀತಿಯ ಹರಕೆಯನ್ನು ಕಟ್ಟಿಕೊಂಡು ಭಯ ಭಕ್ತಿಯಿಂದ ಪೂರೈಸುವುದು ರೂಢಿಯಾಗಿದೆ. ತಮಗೆ ಒದಗದಿದ್ದರೂ ಸಾಲಗೀಲಮಾಡಿಯಾದರೂ ಸರಿ ಆ ಸಮಯಕ್ಕೆ ಭಕ್ತಿಯಿಂದ ಹರಕೆ ಒಪ್ಪಿಸಲಾಗುತ್ತದೆ.

**ಆಕರಗಳು**


೧) ಕರ್ನಾಟಕ ಜಾತ್ರೆಗಳು - ಹಂಪನಾ

೨) ಜಾತ್ರೆಗಳು - ಎಸ್.ಎಸ್.ಹಿರೇಮಠ

೩) ಜಾನಪದ ಅಧ್ಯಯನ – ದೇ. ಜವರೇಗೌಡ.

೪) ಮಹಾಕವಿ ವಾಲ್ಮೀಕಿ ವರ್ಧಂತಿ – ಪ್ರೊ. ಡಿ.ಟಿ.ರಂಗಸ್ವಾಮಿ

೫) ಕಡಲಬಾಳು ಆಂಜನೇಯ ಸ್ವಾಮಿ; ಒಂದು ಸಾಂಸ್ಕೃತಿಕ ಅಧ್ಯಯನ–ಉಮಾಪತಿ ಬಿ.

೬) ಗೊಳಸಂಗಿ ಸಮುದಾಯ ಒಂದು ಅಧ್ಯಯನ; ವಿ.ಎಸ್.ಮಾರುತಿ.

೭) ಶ್ರೀರಾಮಾಯಣ ದರ್ಶನಂ ವಚನ ಚಂದ್ರಿಕೆ – ದೇ. ಜ. ಗೌ.

೮) ಪುರಾಣನಾಮ ಚೂಡಾಮಣಿ– ಬೆನಗಲ್ ರಾಮರಾವ್, ಪಾನ್ಯಂ ಸುಂದರ ಶಾಸ್ತ್ರಿ; ವಿದ್ವಾ ಪ್ರ. ಸಂ. ಬಿ. ಎಂ. ಶ್ರೀ.

# ಅಧ್ಯಾಯ – ೫

## ಆಂಜನೇಯ ಹಾಗೂ ಇತರೆ ದೇವತೆಗಳ ಸಂಬಂಧ

ಕೋಗಳಿ ಗ್ರಾಮವು ಸಾಹಿತಿಗಳ ಊರು, ಕಲಾವಿದರ ನಾಡು, ದೇವಾಲಯ ಬೀಡು, ಶಾಸನಗಳ ತವರೂರು ಎನ್ನಬಹುದು. ಇಲ್ಲಿ ಜನರು ಒಂದೊಂದು ಜಾತಿಯವರು ಒಂದೊಂದು ದೇವರುಗಳಿಗೆ ನಡೆದುಕೊಳ್ಳುತ್ತಾರೆ. ಕೋಗಳಿಯಲ್ಲಿ ಎಲ್ಲ ದೈವಕ್ಕಿಂತಲೂ ಆಂಜನೇಯನನ್ನು ಪೂಜಿಸುವವರೇ ಹೆಚ್ಚು.

ಊರುಗಳನ್ನು ಕಾಯಲು ಅವತರಿಸಿದವನೇ ಆಂಜನೇಯ ಸ್ವಾಮಿ. ಆಂಜನೇಯನಿರದ ಹಳ್ಳಿ ಇಲ್ಲ. ಪ್ರತಿ ಹಳ್ಳಿಯಲ್ಲಿಯೂ ಆಂಜನೆಯನನ್ನು ಕಾಣಬಹುದು. ಜಾತ್ರೆ, ಹಬ್ಬ, ಅಮವಾಸ್ಯೆಗೆ ಬರುವ ಆಂಜನೇಯನ ಭಕ್ತರು ಕಾಯಿ ಹೊಡಿಸಿಕೊಂಡು, ಪೂಜೆ ಮಾಡಿಸಿಕೊಂಡು ಹೋಗುತ್ತಾರೆ.

**ವೀರಣ್ಣ**

ಕೋಗಳಿಯ ಎರಡನೆಯ ಮುಖ್ಯ ದೇವರೆಂದರೆ ವೀರಭದ್ರೇಶ್ವರ. ಸುಮಾರು ಕ್ರಿ. ಶ. ೫೨೯ –೫೭೦ರವರೆಗೆ ಆಳಿದ ಗಂಗದೊರೆ ದುರ್ವಿನಿತನು ಕೋಗಳಿಯಲ್ಲಿ ಈ ದೇವಸ್ಥಾನವನ್ನು ನಿರ್ಮಿಸಿರಬಹುದು. ನೋಡಲು ಬಹಳ ಹಳೆಯ ದೇವಾಲಯವಾಗಿದ್ದು ಗರ್ಭಗುಡಿಯು ಮತ್ತು ದೇವರ ಮೂರ್ತಿಯು ಅಲ್ಲಿನ ಕಂಬಗಳು ಮತ್ತು ದೇವಸ್ಥಾನದ ಮುಂದೆ ಇರುವ ಶಾಸನ ಕಲ್ಲುಗಳು ಇವುಗಳನ್ನು ನೋಡಿದರೆ ದೇವಾಲಯ ಬಹಳ ಹಳೆಯದು. ಈ ದೇವರ ಪೂಜೆಯನ್ನು ವೀರಶೈವ ಮತದ ಅರ್ಚಕರು ಮಾಡುತ್ತಿದ್ದಾರೆ. ಶ್ರಾವಣ ಮಾಸದ ಒಂದು ಸೋಮವಾರದ ದಿನ ವೀರಭದ್ರೇಶ್ವರನ್ನು ಹೊಳೆಗೆ ಸ್ನಾನ ಮಾಡಲು ಕರೆದೊಯ್ಯಲಾಗುತ್ತದೆ. ಸಾಂಬಾಳ, ನಂದಿಕೋಲು, ಶಹನಾಯಿ ಮುಂತಾದ ವಾದ್ಯಗಳ ಮುಖಾಂತರ ಊರಿನ ತುಂಬಾ ಸ್ವಾಮಿಯನ್ನು ಮೆರವಣಿಗೆ ಮಾಡಿ ಆಂಜನೇಯನಲ್ಲಿ ಪೂಜೆ ಮಾಡಿಸಿಕೊಂಡು ಹೊಳೆಗೆ ಹೋಗುತ್ತಾರೆ. ಆದಿನ ಪುರುಷರು ಮತ್ತು ಸ್ತ್ರೀಯರು ನೂರೊಂದು ಗಂಟು ಹಾಕಿದ ದಾರವನ್ನು ಶಸ್ತ್ರದ ಮುಖಾಂತರ ಗಲ್ಲಕ್ಕೆ, ತುಟಿಗೆ, ಮುಂಗೈನ ಚರ್ಮಕ್ಕೆ ಚುಚ್ಚಿಕೊಂಡು ದಾಟಿಸಿಕೊಳ್ಳುವುದುಂಟು. ಇವರು ಭಕ್ತಿ ಪರವಶರಾಗಿ ವಾದ್ಯಗಳ ಗತ್ತಿಗೆ ಕುಣಿಯುತ್ತಾರೆ. ಅಂದು ಊರಲ್ಲಿ ವೀರಶೈವ ಮತದವರು ಉಪವಾಸ ಆಚರಿಸುತ್ತಾರೆ. ಹೋಳಿಗೆ, ಹುಗ್ಗಿ, ಮುಂತಾದ ಎಡೆಯನ್ನು ವೀರಣ್ಣನ ದೇವಸ್ಥಾನಕ್ಕೆ ತಂದು ನೈವೇದ್ಯ ಮಾಡುತ್ತಾರೆ.

**ದುರ್ಗಮ್ಮ**

ನಮ್ಮಲ್ಲಿ ಜಾನಪದ ಸಂಸ್ಕೃತಿ ಉಳಿದಿರುವುದೇ ನಿಜವಾಗಿ ಕೆಳವರ್ಗದ ಜನರಲ್ಲಿ. ದುರುಗಮ್ಮ, ಚಾರಿದುರುಗಮ್ಮ ಎನ್ನುವ ಎರಡು ದೇವತೆಗಳ ಮೂರ್ತಿಗಳು ದೇವಸ್ಥಾನದಲ್ಲಿವೆ.

ಈ ದುರ್ಗಮ್ಮನ ದೇವಸ್ಥಾನವು ಹರಿಜನ ಕೇರಿಯಲ್ಲಿ ಪೂರ್ವಾಭಿಮುಖವಾಗಿ ಇದೆ. ಇಲ್ಲಿ ನಿತ್ಯವು ಪೂಜೆ ಸಲ್ಲುತ್ತದೆ. ಈ ಗುಡಿಯ ಎದುರಿಗೆ ಒಂದು ಗುಡಿಯು ಇದೆ. ಊರಿನ ಶಕ್ತಿದೇವತೆಯಾದ ಹಾಗೂ ದುರುಗಮ್ಮನ ಅಕ್ಕ ಎಂದು ಕರೆಯಿಸಿಕೊಳ್ಳುವ ಊರಮ್ಮನ ಜಾತ್ರೆಯಲ್ಲಿ ಕೋಣನ ಬೇಟೆ ಕೊಡಲಾಗುವುದು. ಆಕೋಣದ ಕೋಡುಗಳನ್ನು ಈ ದೇವಸ್ಥಾನದ ಮಾಳಿಗೆಯ ಕುಂಬಿಯ ಮೇಲೆ ದುರುಗಮ್ಮನಿಗೆ ಎದುರಾಗಿ ಇಡಲಾಗುತ್ತದೆ. ಗುಡಿಯ ಒಳಗೆ ಕಂಚಿನ ಕೋಡುಗಳನ್ನು ಹೊಂದಿದ ಕೇಲು ಇದೆ.

ಹರಿಜನ ಕೇರಿಯ ದುರುಗಮ್ಮನು ಇಲ್ಲಿ ಪ್ರಖ್ಯಾತಳು ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಇಲ್ಲಿ ದುರುಗಿಯರ ಊಟ ಎನ್ನುವ ಪದ್ಧತಿಯಿದೆ. ಮುತ್ತು ಕಟ್ಟಿಸಿಕೊಂಡ ಮಹಿಳೆಯರಿಗೆ ಒಂದು ದೊಡ್ಡ ಪಾತ್ರೆಯಲ್ಲಿ ಭಕ್ತರು ತಂದು ಹಾಕಿದ ಹೋಳಿಗೆ, ಹಾಲು, ತುಪ್ಪ, ಬಾಳೆಹಣ್ಣನ್ನು ಒಟ್ಟಾಗಿ ಕಲಿಸಿ ನೆಲದ ಮೇಲೆ ಹಾಕಿಕೊಂಡು ೯ಜನ, ೧೧ಜನ ಇಲ್ಲವೆ ೧೬ಜನರು ಒಟ್ಟಾಗಿ ಊಟಮಾಡುವರು. ಒಂದು ವೇಳೆ ಮಿಕ್ಕುಳಿದರೆ ಅದನ್ನು ದೇವಸ್ಥಾನದ ಮುಂದೆ ಊಳುವರು. ಈ ದುರುಗಮ್ಮನನ್ನು ಪೂಜಾರಿಯು ಹೊತ್ತುಕೊಂಡು ಹೊಳೆಗೆ ಹೋಗಿ ಸ್ನಾನ ಮಾಡಿಸಿಕೊಂಡು ಬರುವಾಗ ಆಂಜನೇಯನ ದರ್ಶನ ಮಾಡಿಕೊಂಡು ಪೂಜೆ ಮಾಡಿಸಿಕೊಂಡು ಬರುತ್ತಾರೆ. ದುರುಗಮ್ಮನು ಕೇರಿಯಲ್ಲಿ ವಾಸವಾಗಿದ್ದು ಹರಿಜನರ ಆರಾಧ್ಯ ದೇವತೆಯಾಗಿದ್ದಾಳೆ. ಆಂಜನೇಯನು ಊರಲ್ಲಿ ಇದ್ದು, ಈತ ಎಲ್ಲಾ ಜನರ ದೈವವೂ ಆಗಿದ್ದಾನೆ. ಎರಡು ದೇವತೆಗಳು ದೂರ–ದೂರವಾಸವಾಗಿದ್ದರೂ, ಹಬ್ಬ ಹರಿದಿನಗಳಲ್ಲಿ ಒಬ್ಬರನ್ನು ಬಿಟ್ಟು ಮತ್ತೊಬ್ಬರನ್ನು ಪೂಜಿಸುವುದಿಲ್ಲ. ಹರಿಜನರು ಆಂಜನೇಯನಿಗೆ ದರ್ಶನ ಕೋರಿ ಬಂದರೆ ಕೆಲಸಂದರ್ಭಗಳಲ್ಲಿ ಕೇರಿ ದುರುಗಮ್ಮನಿಗಗೆ ಹಣ್ಣು–ಹೂ ಎಂದು ಕೊಡುವ ಪದ್ಧತಿಯು ಊರಲ್ಲಿ ಜನರು ನಡೆಸಿಕೊಂಡು ಬಂದ ಪದ್ಧತಿ. ಹರಿಜನರು ಪ್ರತಿ ಶನಿವಾರ ಆಂಜನೇಯನಿಗೆ ಬರುತ್ತಾರೆ. ಆಂಜನೇಯ ಮತ್ತು ದುರುಗಮ್ಮ ಅಣ್ಣ ತಂಗಿಯರು ಎನ್ನುವ ಭಾವನೆಯು ಅಲ್ಲಿಯ ಜನರಲ್ಲಿ ಅನಾದಿಕಾಲದಿಂದಲೂ ಬೆಳೆದುಕೊಂಡು ಬಂದಿದೆ.

ಆಂಜನೇಯನ ರಥೋತ್ಸವದ ಸಂದರ್ಭದಲ್ಲಿ ದುರುಗಮ್ಮನ ಮೂರ್ತಿಯನ್ನು ಪಾಲಕಿಯಲ್ಲಿ ಕೂಡಿಸಿಕೊಂಡು ಆಂಜನೇಯನು ರಥದ ಬಳಿ ಕರೆದುಕೊಂಡು ಬರುತ್ತಾನೆ. ದುರುಗಮ್ಮನ ಸೇವೆಗಾಗಿ ಮೀಸಲಿರಿಸಿದ ಮಹಿಳೆಯರು (ದುರ್ಗಿ) ರಥವನ್ನು ಪೂಜಿಸದೇ ರಥವೂ ಮುಂದೆ ಸಾಗುವುದಿಲ್ಲ. ಆಂಜನೇಯನು ಹೊಳೆಗೆ ಸ್ನಾನ ಮಾಡಲು ಹೋದರೆ, ಮತ್ತು ದಸರಾದಲ್ಲಿ ಬನ್ನಿಮಹಾಂಕಾಳಿಗೆ ಬನ್ನಿಮುಡಿಯಲು ಹೋದರೆ ಜೊತೆ–ಜೊತೆಗೆ ಕರೆದುಕೊಂಡು ಹೋಗುತ್ತಾನೆ. ಇಷ್ಟರ ಮಟ್ಟಿಗೆ ಇವರ ಸಂಬಂಧ ಗಟ್ಟಿಗೊಂಡಿದೆ.

**ಊರಮ್ಮ**

ಹೆಸರೆ ಸೂಚಿಸುವಂತೆ ಊರಿನ ಸ್ಥಾಪನೆಯು ಊರಮ್ಮನ ಅಸ್ತಿತ್ವಕ್ಕೆ ಪೂರ್ವವಶ್ಯ ಕತೆಯಾಗಿದೆ. ಊರು ಹುಟ್ಟಿದ ನಂತರವಷ್ಟೆ ಊರಮ್ಮನ ಜಾತ್ರೆ ಸಾಧ್ಯವಾಗುತ್ತದೆ. ಈ ಊರಮ್ಮನ

ದೇವಸ್ಥಾನವು ಕೋಗಳಿಯ ಕೋಟೆಯ ಭಾಗದಲ್ಲಿದೆ. ಪೇಟೆಯ ಭಾಗದಲ್ಲಿ ಈಕೆಗೆ ಎದುರಾಗಿ ದಕ್ಷಿಣಾಭಿಮುಖವಾಗಿ ಆಂಜನೇಯನ ದೇವಾಲಯವಿದೆ. ಊರಮ್ಮನು ಕೋಟೆಯ ಜನಕ್ಕಷ್ಟೇ ಅಲ್ಲದೆ ಊರಿನ ಜನರಿಗೆಲ್ಲ ಆದಿಶಕ್ತಿಯಾಗಿದ್ದಾಳೆ. ಪ್ರತಿವರ್ಷ ಕಾರ್ತಿಕೋತ್ಸವವು, ಐದು ವರ್ಷಗಳಿಗೊಮ್ಮೆ ಜಾತ್ರೆಯು ನಡೆಯುತ್ತದೆ. ಜಾತ್ರೆಯಲ್ಲಿ ಐದು ದಿನಗಳವರೆಗೆ ಊರಿಗೆ ಬೇಲಿಯನ್ನು ಹಾಕಿ, ಕೋಣವನ್ನು ಆಕೆಗೆ ಬಲಿ ಕೊಡುವ ಪದ್ಧತಿ ಇದೆ. ಕೋಗಳಿ ಗ್ರಾಮದ ಜನರೆಲ್ಲರು ಊರಮ್ಮನಿಗೆ ಹಣ್ಣು ಹೂಗಳನ್ನು ಕೊಡದ ವಿನಃ ಬಿತ್ತನೆಯ ಕೆಲಸ ಮಾಡುವುದಿಲ್ಲ. ಬಿತ್ತನೆ ಕೆಲಸವನ್ನು ರೈತರು ಆರಂಭಿಸುವುದಕ್ಕೂ ಮುನ್ನ ಊರಮ್ಮನು ಹೊಳೆಗೆ ಹೋಗಿ ಬರುತ್ತಾಳೆ. ಆಗ ಅಣ್ಣ ಆಂಜನೇಯನನ್ನು ಜೊತೆಗೆ ಕರೆದೊಯ್ದು ಹೊಳೆಯಲ್ಲಿ ಸ್ನಾನಾದಿಗಳನ್ನು ಮುಗಿಸಿಕೊಂಡು ಬರುತ್ತಾಳೆ. ಊರಮ್ಮನನ್ನು ಸಕಲ ವಾದ್ಯಗಳ ಮುಖಾಂತರ ಮೆರವಣಿಗೆ ಮಾಡಿಕೊಂಡು ಪುನಃ ದೇವಸ್ಥಾನದಲ್ಲಿ ಕೂಡಿಸುತ್ತಾರೆ. ಇಲ್ಲಿ ಎಲ್ಲಾ ಜನಾಂಗದ ಜನರು ಭಾಗವಹಿಸುತ್ತಾರೆ. ಈ ದೇವಾಲಯವು ಕೂಡ ಜೈನರ ಕಾಲದ್ದು. ಇದರ ಮುಂದೆಯೇ ಹದಿನಾರು ಕಂಬಗಳನ್ನು ಹೊಂದಿದ ಜೈನ ಬಸದಿ ಇದೆ. ಊರಮ್ಮನ ಬಲ ಬದಿಯಲ್ಲಿ ಪಾರ್ಶ್ವನಾಥನ ದೇವಾಲಯವಿದ್ದು, ಮೂರ್ತಿಯು ಶಿಥಿಲಗೊಂಡಿದೆ. ಊರಮ್ಮನ ದೇವಾಲಯವನ್ನು ದುರ್ವಿನೀತನ ಕಾಲದಲ್ಲಿ ನಿರ್ಮಿಸಿರಬಹುದು.

**ಕಲ್ಲೇಶ್ವರ**

ಈ ದೇವಾಲಯವು ಸಂಪೂರ್ಣ ಊರ ಹೊರಗೆ ಇದೆ. ಇದು ಕೂಡ ಪೂರ್ವಾಭಿಮುಖವಾಗಿದ್ದು, ಗರ್ಭಗುಡಿಯೊಳಗೆ ಬಹುದೊಡ್ಡ ಲಿಂಗವಿದೆ. ಗರ್ಭಗುಡಿಗೆ ನಾಲ್ಕು ಕಂಬಗಳಿದ್ದು ಸುತ್ತಲೂ ಕಲ್ಲಿನಿಂದ ನಿರ್ಮಾಣವಾಗಿದೆ. ಲಿಂಗದ ಎದುರಿಗೆ ಬಸವಣ್ಣನ ವಿಗ್ರಹವಿದೆ. ಎಡಭಾಗಕ್ಕೆ ಕಲ್ಲೇಶನ ಮಠವಿದೆ. ಇದನ್ನು ಈಗಲೂ ಕಲ್ಲಪ್ಪನ ಛತ್ರ ಎಂದು ಕರೆಯುತ್ತಾರೆ. ಮಹಾಶಿವರಾತ್ರಿಯ ದಿನ ಕಲ್ಲೇಶ್ವರನಿಗೆ ಕೋಗಳಿಯ ಎಲ್ಲಾ ಜನರು ಅಭಿಷೇಕ, ಪೂಜಾದಿಗಳನ್ನು ಸಲ್ಲಿಸಿ ಜಾಗರಣೆಯನ್ನು ಮಾಡುತ್ತಾರೆ. ಅಂದು ಆಂಜನೇಯನಿಗೂ ಭಕ್ತರು ಕಾಯಿಯನ್ನು ಹೊಡೆಸಿ ಪೂಜೆಮಾಡಿಸುತ್ತಾರೆ. ಕಲ್ಲೇಶ್ವರನ ದೇವಾಲಯ ಕೂಡ ಜೈನರ ಕಾಲದ್ದೇ ಆಗಿದೆ. ಊರಮ್ಮ, ಆಂಜನೇಯ, ಕಲ್ಲೇಶ್ವರ, ವೀರಭದ್ರೇಶ್ವರ ಈ ನಾಲ್ಕು ದೇವಾಲಯಗಳು ಒಂದೇ ವೇಳೆಯಲ್ಲಿ ಸ್ಥಾಪನೆಯಾಗಿವೆ ಎಂದು ತಿಳಿಯುತ್ತದೆ. ಕಾರಣ ಒಂದೇ ಶೈಲಿಯಲ್ಲಿ ಗರ್ಭಗುಡಿಗಳಿದ್ದು, ಈ ದೇವಾಲಯಗಳ ಮುಂದೆ ದೊಡ್ಡ ದೊಡ್ಡ ಶಾಸನ ಕಲ್ಲುಗಳಿರುವದರಿಂದ ಮತ್ತು ನಾಲ್ಕು ದೇವಾಲಯಗಳನ್ನು ಜೈನರು ನಿರ್ಮಿಸಿದರು ಎನ್ನುವುದಕ್ಕೆ ಉತ್ತರವಾಗಿ ಈ ದೇವಾಲಯಗಳು ಸಾಕ್ಷಿ ನುಡಿಯುತ್ತವೆ.

ಕಲ್ಲೇಶ್ವರ ದೇವರಿಗೂ ದಿನಾಲು ಪೂಜೆಗಳು ಸಲ್ಲುತ್ತವೆ. ವೀರಶೈವ ಮತದ ಅರ್ಚಕನು ಸ್ನಾನಾದಿಗಳನ್ನು ಮುಗಿಸಿ ತುಂಬಿದ ಕೊಡವನ್ನು ತಂದು ದೇವರಿಗೆ ಸ್ನಾನ ಮಾಡಿಸಿ ಪೂಜೆಯನ್ನು ಮಾಡುತ್ತಾನೆ.

**ಬಸವಣ್ಣ**

ಈ ದೇವಾಲಯವು ಕೋಗಳಿಯ ಪಶ್ಚಿಮ ದಿಕ್ಕಿನಲ್ಲಿ ರಸ್ತೆಯ ಬದಿಯಲ್ಲಿ ಪೂರ್ವಾಭಿಮುಖವಾಗಿ ಸ್ಥಾಪನೆಗೊಂಡಿದೆ. ಇದನ್ನು ಸುಮಾರು ೧೯೯೦ರಲ್ಲಿ ಸ್ಥಾಪಿಸಿದ್ದಾರೆ. ಬಸವಣ್ಣನಿಗೂ ದಿನಾಲು ಪೂಜೆ ನಡೆಯುತ್ತದೆ. ಪ್ರತಿವರ್ಷ ಕಾರ್ತಿಕೋತ್ಸವ ಮತ್ತು ಶಿವರಾತ್ರಿಯಲ್ಲಿ ಬಸವಣ್ಣನ ರಥೋತ್ಸವ ಮತ್ತು ನಂತರದ ದಿನ ಸಾಮೂಹಿಕ ವಿವಾಹಗಳು ನಡೆಯುತ್ತವೆ. ಕೋಗಳಿಯ ಸುತ್ತಮುತ್ತಲಿನ ಊರಿನವರು ಇಲ್ಲಿ ರಥೋತ್ಸವ, ಜಾತ್ರೆ, ಮದುವೆಯಲ್ಲಿ ಪಾಲ್ಗೊಳ್ಳುತ್ತಾರೆ. ಆ ಸಮಯದಲ್ಲಿ ಆಂಜನೇಯನಿಗೂ ವಿಶೇಷ ಪೂಜೆಯನ್ನು ಮಾಡಲಾಗುತ್ತದೆ. ಸಾಮೂಹಿಕ ವಿವಾಹ ಪದ್ಧತಿಯು ೧೯೯೦ರ ನಂತರ ಪ್ರತಿವರ್ಷ ನಡೆದುಕೊಂಡು ಬಂದಿದೆ.

**ಬೀರಪ್ಪ**

ಕುರುಬ ಜನಾಂಗದ ಆರಾಧ್ಯ ದೈವ ಇದಾಗಿದ್ದು, ಪ್ರತಿವರ್ಷ ಕಾರ್ತಿಕೋತ್ಸವ ನಡೆಯುತ್ತದೆ. ಕುರುಬ ಜನಾಂಗದವರು ಮೂರ್ತಿಯನ್ನು ಪಾಲಕಿಯಲ್ಲಿ ಕೂಡಿಸಿಕೊಂಡು ಡೊಳ್ಳು, ನಂದಿಕೋಲು, ಶಹನಾಯಿ ಮುಂತಾದ ವಾದ್ಯಗಳ ಮುಖಾಂತರ ಮೆರವಣಿಗೆಯನ್ನು ಮಾಡಿ ಪೂಜಿಸುವುದುಂಟು. ಊರಿಗೆ ಮಳೆಯು ಬಾರದಿದ್ದರೆ ಈತನಲ್ಲಿ ಹೂವನ್ನು ಕೇಳುವ ಪದ್ಧತಿಯು ಊರಿನಲ್ಲಿ ನಡೆದುಕೊಂಡು ಬಂದಿದೆ. ಬೀರಪ್ಪನ ಪರುವು ಮಾಡುತ್ತಾರೆ. ಇಲ್ಲಿ ಎಲ್ಲಾ ಜನಾಂಗದವರು ಪಾಲ್ಗೊಳ್ಳುತ್ತಾರೆ.

**ಮೈಲಾರಲಿಂಗ**

ಮೈಲಾರಲಿಂಗನ ಒಕ್ಕಲು ಕೋಗಳಿಯಲ್ಲಿ ಬಹಳ ಜನರು ಇರುವುದರಿಂದ ಇತ್ತೀಚೆಗೆ ಐದಾರು ವರ್ಷಗಳ ಹಿಂದೆ ಈತನ ಗದ್ದುಗೆಯನ್ನು ಸ್ಥಾಪಿಸಲಾಗಿದೆ. ಮೈಲಾರಲಿಂಗ ಮತ್ತು ಗಂಗಮಾಳವ್ವನ ರೀತಿಯಲ್ಲಿ ಎರಡು ಗುಂಡುಗಳನ್ನು ಒಂದು ಕಟ್ಟೆಯನ್ನು ಕಟ್ಟಿ ಕೂಡಿಸಲಾಗಿದ್ದು ಮುಂದೆ ಒಂದು ಕಂಬವನ್ನು ನೆಡಲಾಗಿದೆ. ಈ ದೇವರಿಗೆ ಸಂಬಂಧಿಸಿದಂತೆ ಮುದ್ದಿ ಹುಣ್ಣಿಮೆಯ ಸಂದರ್ಭದಲ್ಲಿ ವಿಶೇಷ ಪೂಜೆಯನ್ನು ಮಾಡುತ್ತಾರೆ. ಹಡಗಲಿ ತಾಲೂಕಿನ ಮೈಲಾರ ಜಾತ್ರೆಯ ಸಮಯದಲ್ಲಿ ಇಲ್ಲಿಯೂ ಕೂಡ ಹುಳ್ಳಿಕಾಳು ಊರಣ ಮತ್ತು ಧಾನ್ಯಗಳ ಗುಗ್ಗರಿಯನ್ನು ಎಡೆ ಮಾಡುತ್ತಾರೆ. ಆಂಜನೇಯನ ಕಾರ್ತಿಕದ ದಿನ ಇಲ್ಲಿಯು ದೀಪಾರಾಧನೆ ಮಾಡಲಾಗುತ್ತದೆ.

**ಹಗರಿ ಬಸವೇಶ್ವರ**

ಊರಾಚೆ ಉತ್ತರಕ್ಕೆ ಹಗರಿಬಸವೇಶ್ವರನ ದೇವಾಲಯವಿದ್ದು, ಈತನ ರಥೋತ್ಸವವು ಅವರಾತ್ರಿ ಅಮವಾಸ್ಯೆಯ ನಂತರ ಜರುಗುತ್ತದೆ. ಈ ರಥೋತ್ಸವವು ಈಗ್ಗೆ ಸುಮಾರು ನೂರಾರು ವರ್ಷಗಳ ಹಿಂದಿನಿಂದಲೂ ಕೋಗಳಿಯ ಪಕ್ಕದ ಹಳ್ಳಿಯಾದ ಚಿಮ್ಮನಹಳ್ಳಿ ದುರ್ಗಮ್ಮನ ಗುಡಿಯ ಬಯಲಿನಲ್ಲಿ ನಡೆಯುತ್ತದೆ. ಈ ರಥೋತ್ಸವಕ್ಕೆ ಕೋಗಳಿ ಆಂಜನೇಯನು ಹೋಗಿ ಚಾಲನೆಯನ್ನು ಕೊಡುತ್ತಾನೆ. ಕೋಗಳಿಯ ನಾಯಕ ಜನಾಂಗದವರು ಬಾಳೆಗಿಡ, ತೆಂಗಿನ ಗರಿ, ಬಲೆಬುತ್ತಿ,

ಮುಂತಾದವುಗಳನ್ನು ತರುತ್ತಾರೆ. ನಂತರ ೩-೪ ದಿನಗಳ ಕಾಲ ದುರ್ಗಮ್ಮನ ಜಾತ್ರೆ ನಡೆಯುತ್ತದೆ. ಸುತ್ತಲಿನ ಹಳ್ಳಿಗಳಿಂದ ಬಂದ ಭಕ್ತರು ಈ ಜಾತ್ರೆ ರಥೋತ್ಸವದಲ್ಲಿ ಭಕ್ತಿಯಿಂದ ಭಾಗವಹಿಸುತ್ತಾರೆ.

**ಪಕ್ಕೀರ ಸ್ವಾಮಿ**

ಕೋಗಳಿಯಲ್ಲಿ ಊರಿನ ಮಧ್ಯದಲ್ಲಿ ಪಕ್ಕೀರ ಸ್ವಾಮಿಯ ಚಿಕ್ಕ ಮಸೀದಿ ಇದೆ. ಮುಸ್ಲಿಂ ಜನಾಂಗದವರು ಒಂದೆರಡು ಮನೆಯವರು ಮಾತ್ರ ಇರುವುದರಿಂದ ಹಿಂದೂಗಳೇ ಈ ಕುರಿತ ಹಬ್ಬ ಆಚರಣೆಯಲ್ಲಿ ಭಾಗವಹಿಸುತ್ತಾರೆ. ಹಿಂದೂ ಮುಸ್ಲಿಂ ಭಾವೈಕ್ಯತೆಯ ಪ್ರತೀಕವೂ ಕೂಡ ಆಗಿ ಮುಸ್ಲಿಂ ಆಚರಣೆಗಳನ್ನು ಕೋಗಳಿಯಲ್ಲಿ ಮಾಡುತ್ತಾ ಬಂದಿದ್ದಾರೆ. ಕೋಗಳಿಯಲ್ಲಿ ಹಿಂದೂಗಳ ಎಲ್ಲಾ ಹಬ್ಬದಲ್ಲಿಯು ಇರುವ ಒಂದೆರಡು ಮನೆಯ ಮುಸ್ಲೀಮರು ಭಾಗವಹಿಸುತ್ತಾರೆ. ವಿಶೇಷವೆಂದರೆ ಪಿಂಜಾರು ದೊಡ್ಡ ಬುಡೆನ್‌ಸಾಬ್ ಮತ್ತು ಆತನ ಮಕ್ಕಳು ಮುಂತಾದವರು ಪ್ರತಿ ಶನಿವಾರ ಆಂಜನೇಯನ ದೇವಸ್ಥಾನಕ್ಕೆ ಬಂದು ಹೋಗುತ್ತಾರೆ. ಭಜನಾ ಹಾಡುಗಳನ್ನು ಹೇಳುತ್ತಾರೆ. ಆಂಜನೇಯನ ಉತ್ಸವದಲ್ಲಿ ಭಾಗವಹಿಸುತ್ತಾರೆ. ಮೊಹರಂ ಹಬ್ಬದಲ್ಲಿ ಆಂಜನೇಯನ ಒಕ್ಕಲುಗಳಾದ ನಾಯಕರು ಹುಲಿಯ ವೇಷವನ್ನು ಹಾಕಿ ಪಕ್ಕೀರ ಸ್ವಾಮಿಗೆ ಸೇವೆಯನ್ನು ಅರ್ಪಿಸುತ್ತಾರೆ.

**ಸಂಗಬಸಪ್ಪನ ಮಠ**

ಊರಿನ ಪೂರ್ವ ಭಾಗದಲ್ಲಿ ಊರಿನ ಹೊರವಲಯದಲ್ಲಿ ಸಂಗಬಸಪ್ಪನ ದೇವಾಲಯವಿದ್ದು ಗುಡಿಯಲ್ಲಿ ಒಂದು ಸಂಗಬಸಪ್ಪನ ಮೂರ್ತಿ ಅಂದರೆ ಬಸವಣ್ಣನ ಮೂರ್ತಿ ಮತ್ತೊಂದು ದೊಡ್ಡ ನಾಗಪ್ಪನ ವಿಗ್ರಹವೂ ಇದೆ. ಈ ದೇವಾಲಯದ ಆವರಣದಲ್ಲಿ ಬನ್ನಿಮಹಾಂಕಾಳಿ ಮರವಿದ್ದು (ಶಮೀವೃಕ್ಷ) ಇಲ್ಲಿಯೇ ಊರಿನ ಪ್ರಮುಖ ದೇವರುಗಳು ಮತ್ತು ಆಂಜನೇಯನು ಬನ್ನಿ ಮುಡಿಯಲು ಬರುವುದು. ಆಗ ಸಂಗ ಬಸಪ್ಪನಿಗೆ ಪೂಜೆ ಸಲ್ಲಿಸಿ ಬನ್ನಿ ಮುಡಿಯುತ್ತಾರೆ. ಈ ದೇವಾಲಯದ ಹತ್ತಿರವೇ ಹನುಮಪ್ಪನ ಪಾಡಗಟ್ಟೆ ಇದ್ದು, ಆಂಜನೇಯನು ಮುಳ್ಳುಪವಾಡ ಮಾಡುವುದು ಕೂಡ ಇಲ್ಲಿಯೇ. ಕಾರಣ ಯುಗಾದಿಯ ಸಂದರ್ಭದಲ್ಲಿ ಆಂಜನೇಯನು ಮುಳ್ಳುಪವಾಡ ಮಾಡುವುದಕ್ಕೂ ಮುನ್ನ ಸಂಗಬಸಪ್ಪನ ಗುಡಿಗೆ ಹೋಗಿ ದರ್ಶನವನ್ನು ಪಡೆದುಕೊಂಡು ಬರುತ್ತಾನೆ.

**ಪರುತಸ್ವಾಮಿ (ಪರುತಪ್ಪ)**

ಇದು ಸಣ್ಣ ಗುಡಿಯಾಗಿದೆ. ಈ ಗುಡಿಯೊಳಗೆ ಪರುತಪ್ಪನ ವಿಗ್ರಹವನ್ನು ಇಟ್ಟು ಪೂಜಿಸಲಾಗುತ್ತದೆ. ಆಂಜನೇಯನ ಕಾರ್ತಿಕದ ಸಂದರ್ಭದಲ್ಲಿ ಇಲ್ಲಿಯು ದೀಪ ಹಚ್ಚಿ ಬರಲಾಗುತ್ತದೆ.

**ಕಾಳಮ್ಮನ ಗುಡಿ**

ಈ ಗುಡಿಯು ಬೆಸ್ತರ ಓಣಿಯಲ್ಲಿ ಇದ್ದು, ಈ ದೇವತೆಯ ಪೂಜೆಯನ್ನು ಆ ಜನಾಂಗದವರೇ ಮಾಡುತ್ತಾರೆ. ಈ ದೇವತೆಯು ಒಂದು ಕಟ್ಟೆಯ ಮೇಲೆ ನೆಲೆಸಿ ಪೂಜಿಸಿಕೊಳ್ಳುತ್ತಿದ್ದು ಆಂಜನೇಯನ ಕಾರ್ತಿಕದಲ್ಲಿ ಇಲ್ಲಿಯೂ ದೀಪ ಹಚ್ಚಿ ಕಾರ್ತಿಕೋತ್ಸವ ಮಾಡಲಾಗುವುದು.


೧. ಜಾತ್ರೆಗಳು – ಎಸ್. ಎಸ್. ಹಿರೇಮಠ, ಸಮತಾ ಪ್ರಕಾಶನ, ಹೊಸಪೇಟೆ, ೧೯೯೩

೨. ಕರ್ನಾಟಕದ ಜಾತ್ರೆಗಳು –ಹಂಪ. ನಾಗರಾಜಯ್ಯ, ಕ.ಸಾ.ಪ. ಬೆಂಗಳೂರು.

೩. ಕಡಲಬಾಳು ಆಂಜನೇಯ ಒಂದು ಸಾಂಸ್ಕೃತಿಕ ಅಧ್ಯಯನ, ಉಮಾಪತಿ. ಬಿ.

೪. ಬೆಗಡೇರಿ ನಾರಪ್ಪ– ಅಂಜನಪ್ಪ ದನಕಾವರ್

# ಅಧ್ಯಾಯ – ೬

## ಸಾಹಿತ್ಯ : ಕಥೆ, ಗಾದೆ, ಐತಿಹ್ಯ, ನಂಬಿಕೆ, ಹರಕೆಗಳು.

ಮನುಷ್ಯನು ಎಂದಿನಿಂದ ಆಚರಣೆಗಳನ್ನು ಮಾಡುತ್ತಾ ಬಂದನೋ ಅಂದಿನಿಂದಲೇ ಅವುಗಳಿಗೆ ಸಂವಾದಿಯಾಗಿ ಹಾಡುಗಳನ್ನು ಹಾಡುತ್ತಲೇ ಬಂದಿದ್ದಾನೆ. ಹಾಗೆಯೇ ಜಾನಪದ ಗೀತೆಯು ಯಾವುದನ್ನೇ ವಿವರಿಸಲಿ ಅದನ್ನು ನೇರವಾಗಿ ಹೇಳುತ್ತದೆ. ಅದನ್ನು ಪ್ರಯತ್ನಪೂರ್ವಕವಾಗಿ, ಕಲಾತ್ಮಕಗೊಳಿಸುವ ಅಥವಾ ಕಾವ್ಯದ ಪರಿಣಾಮಗಳನ್ನು ತೆರೆಯಬೇಕು ಎಂಬ ಉದ್ದೇಶವು ಆತನಿಗೆ ಇರಲಿಲ್ಲ. ಇಲ್ಲಿ ಸಾಹಿತ್ಯ ಮೌಲ್ಯಕ್ಕಿಂತ ಹೆಚ್ಚಾಗಿ ಸಾಮಾಜಿಕ, ಚಾರಿತ್ರಿಕ ಹಾಗೂ ಮನಶಾಸ್ತ್ರೀಯ ಮೌಲ್ಯಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಇದರಿಂದ ಜನಪದರ ಮನೋಭಾನೆಗಳನ್ನು ನಿರ್ಧರಿಸಲು ಸಾಧ್ಯವಾಗುತ್ತದೆ.

ಜಾನಪದ ಗೀತೆಯು ಯಾವುದೇ ಸದಸ್ಯರು ಹಾಡ ಬಹುದಾದ ಒಂದು ಕಲೆ, ಜನಪದ ಸಮೂದಾಯದಲ್ಲಿ ಪ್ರತಿಯೊಬ್ಬರೂ ಹಾಡುಗಳನ್ನು ಹಾಡಬಲ್ಲರು. ಯಾವುದೇ ಸಂದರ್ಭವನ್ನು ನೋಡಿದಾಗಲು, ಸುಖ, ದುಃಖ, ಉಲ್ಲಾಸ, ನೆಮ್ಮದಿ ಎಂತಹ ಸಮಯದಲ್ಲಿಯೂ, ಕುಟ್ಟುವಾಗ, ಬೀಸುವಾಗ, ಹೊಲದಲ್ಲಿ ಕಳೆ ತೆಗೆಯುವಾಗ, ಒಕ್ಕಲು ಮಾಡುವಾಗ, ಧಾರ್ಮಿಕ ಆಚರಣೆಯ ಸಂದರ್ಭದಲ್ಲಿ ಯಾವಾಗಲಾದರೂ ಹಾಡನ್ನು ಕಟ್ಟಿ ಹಾಡುವುದು ನಮ್ಮ ಜನಪದರಿಗೆ ಗೊತ್ತಿದೆ. ಜನಪದರು ನಿರಕ್ಷರರಾಗಿದ್ದರೂ ಕೂಡ ಅವರಲ್ಲಿ ಪ್ರತಿಭೆಯು ಉದಯಿಸಿದರೆ ಕಲಿತವರನ್ನೂ ಕೂಡ ನಾಚಿಸುವ ಕೃತಿಗಳು ಅವರಿಂದ ಹೊರಬರುತ್ತವೆಂಬ ಮಾತು ನಮ್ಮ ಶಿಕ್ಷಿತರಿಗೆ ಮನವರಿಕೆಯಾಗುವುದಕ್ಕೆ ಈ ಜಾನಪದ ಹಾಡುಗಳು, ಕಥೆಗಳೇ ಸಾಕ್ಷಿ. ಆದ್ದರಿಂದ ಕವಿಗಳಾಗುವವರು, ಆಗಲು ಬಯಸುವವರು ಪ್ರತಿಭೆಯನ್ನು ಪಡೆದುಕೊಳ್ಳದೆ ಗತ್ಯಂತರವಿಲ್ಲ ಎಂಬುದನ್ನು ಅರಿತು ಕೊಳ್ಳುವುದಕ್ಕೆ ಇವು ಸಾಧನಗಳಾಗಿವೆ. ಅಲ್ಲದೆ ವಿದ್ಯಾರಹಿತರೂ ಕೂಡ ರಸೋನ್ಮೇಷಕ್ಕೆ ಬಂದು ಮುಟ್ಟಿರುವಾಗ ತಾವೇಕೆ ಆ ಸೆಲೆಗೆ ಮುಟ್ಟಬಾರದೆಂಬ ಆಸೆ ಭರವಸೆಗಳು ಹೊಸಬರಲ್ಲಿ ಚಿಮ್ಮುವುದಕ್ಕೆ ಇವು ಸಹಾಯಕಾರಿಯಾಗಿವೆ. ಅಂತೆಯೇ ಕೋಗಳಿಯಲ್ಲಿ ಜನಪದ ಕಲಾವಿದರು ಆಂಜನೇಯನ ಮೇಲೆ ಮಂಗಳಾರತಿ ಪದವನ್ನು ಹಾಡುತ್ತಾರೆ. ಈ ರೀತಿಯ ಹಾಡು ನಾಲಗೆಯಿಂದ ನಾಲಗೆಗೆ ಹರಿದುಕೊಂಡು ಬಂದಿದೆ ಹಾಗೂ ಜೀವಂತವಾಗಿದೆ.

**ಮಂಗಳಾರತಿ ಹಾಡು ೧**

ಮಂಗಳಾರತಿ ತಂದು ಬೆಳಗಿರೆ
ಅಂಜನಾ ಬಾಲ ಕುಮಾರಗೆ
ಮಂಜು ಮುಸುಕಿನ ಮೋಜುಗಾರ
ಆಂಜನೇಯನ ಪಾದಕೆರೆಗೆನೇ (ಮಂಗಲಂ)

ಉದಯ ವ್ಯಾಳ್ಯಕೆ ಹುಟ್ಯಾನೆ

ತಾನು ಕದನಕೆ ಕಾಲು ಕೆದಿರನೇ
ಅಸುವ ತಾಳದೆ ರವಿಯ ನುಂಗಿ
ದುಂದುಗಾಳಗ ನಾಡೇನೇ (ಮಂಗಲಂ)

ಬಡವಿ ಬಂದಿನಿ ಪಾಲಿಸೋ
ಒಂದು ನುಡಿಯ ನಾಡುವೆ ಲಾಲಿಸೋ
ಉಡಿಯ ಒಡ್ಡಿ ಬೇಡಿದರೆ ಎಡಕ
ತಾನ್ ಮಾರಿ ತಿರುವ್ಯಾನೇ (ಮಂಗಲಂ)

ಹನುಮನೆಂಬ ದುಷ್ಟನೆ
ನಡು ನೀರಲೆ ತಾ ನಿಂತನೆ
ಬಿಂಕ ಬಿಟ್ಟು ಪರಲಂಕಕೆರಗಿದ
ಬಾಲ ದಂಡ ಹನುಮನೇ (ಮಂಗಲಂ)

ಬಾಳೆ ವನಕ ಹೋದನೇ
ತಾನು ಬಾಲನಾಗಿ ಕುಂತನೇ
ಬಾಳೆಕಿತ್ತು ಬಯಲು
ಮಾಡಿದ ಹನುಮನೇ (ಮಂಗಲಂ)

ನಿಂಬೆ ವನಕ ಹೋದನೇ
ತಾನು ಮಂಗನಾಗಿ ಕುಳಿತನೇ
ನಿಂಬೆ ಕಿತ್ತು ದಂಡಿಗಿತ್ತನೇ
ಬಾಲದಂಡು ಹನುಮನೇ (ಮಂಗಲಂ)

ಅಪ್ಪ ನಿನ್ನ ಪೂರ್ವದಲ್ಲಿ ಎಷ್ಟು
ಗದ್ದಲಾದವೋ ಗರುಡ ಜನಿಸಿದ
ರವಿಯ ದುಂಗರ ಹೋಗಿ ತಾಯಿಗೆ
ಕೊಟ್ಟನೋ (ಮಂಗಲಂ)

೨ ಮಾರಾಯ ಹರನಿಗೆ ಮರುಳ ಶಂಕರಗೆ
ಪಾರ್ವತಿ ಪತಿ ಗಂಗ ಜಡೆಯೊಳಡಗಿಕೊಂಡು
ಬೆಳಗುವೆನಾರುತಿಯ ಮಹೇಶಗೆ
ಬೆಳಗುವೆನಾರತಿಯ

ಮಡಿಗಿಡಿಗಳನು ಉಟ್ಟು ಮಗ್ಗಿ ಕುಪ್ಪಸವ ತೊಟ್ಟು
ಹಣೆಯ ಮೇಲೆ ಭಸ್ಮ ತಿಲಕಾವ ಇಟ್ಟು
ಬೆಳಗುವೆ ನಾರುತಿಯ ಮಹೇಶಗೆ
ಬೆಳಗುವೆನಾರತಿಯ

ಬೆಳಗುವೆ ನಾರುತಿಯ ಕರಿಮುಖದಾತನಿಗೆ

ದೊರೆಯಿಳೆ ಕೋಗಳಿ ಕರಿಹನುಮಂತನಿಗೆ

ಬೆಳಗುವೆ ನಾರುತಿಯ ಹನುಮಗೆ

ಬೆಳಗುವೆನಾರತಿಯ

**ಕಥೆ**

ಕೋಗಳಿ ಗ್ರಾಮದಲ್ಲಿ ನೀಲಕಂಠನ ಗೌಡ್ರ ಚೆನ್ನಜ್ಜ, ಹೊಂಬಾಳೆ ಕಸ್ತೂರಮ್ಮ, ಕೊರಿಬೀಡಿ ಸೇದುವ ಹುಡುಗ 'ಕೊರಿಬೀಡಿ' ಇದ್ದರಂತೆ. ಚೆನ್ನಜ್ಜನು ಈ ಊರಿಗೆ ಶ್ರೀಮಂತನಾಗಿದ್ದನು. ಊರಿನ ಸುತ್ತಮುತ್ತಲೂ ಭೂಮಿಯನ್ನು ಹೊಂದಿದ್ದ. ಈ ಕಡೆ ಕಸ್ತೂರಮ್ಮ ನಾಲ್ಕಾರು ಎಮ್ಮೆಗಳನ್ನು ಸಾಕಿ ಹಾಲು, ಮೊಸರು, ಬೆಣ್ಣೆಯನ್ನು ಮಾರಿ ಜೀವನ ಸಾಗಿಸುತ್ತಿದ್ದಳು. ಈಕೆಯ ಮನೆಯಲ್ಲಿ ಕೊರಿಬೀಡಿಯು ಎಮ್ಮೆ ಕಾಯುವ ಕೆಲಸವನ್ನು ಮಾಡುತ್ತಿದ್ದನು. ದಿನಾಲು ಕೊರಿಬೀಡಿಯು ಎಮ್ಮೆಗಳನ್ನು ಮೇಯಿಸಲು ಮನೆಯಿಂದ ಹೊರಟನೆಂದರೆ ಮನೆಯಿಂದ ಊರು ದಾಟುವ ವರೆಗೂ ಸೇದಿ ಬಿಸಾಕಿದ ಬೀಡಿಗಳನ್ನು ಆಯ್ದುಕೊಂಡು ದಾರಿಯಲ್ಲಿಯೇ ಇರುವ ಆಂಜನೇಯನಿಗೆ ಕೈಮುಗಿದು ಹೋಗಿ, ಊರಾಚೆ ಇರುವ ಹಗರಿಬಸವೇಶ್ವರನ ದೇವಸ್ಥಾನದಲ್ಲಿ ಕುಳಿತು ಬೀಡಿಗಳು ಕಾಲಿಯಾಗುವವರೆಗೂ ಸೇದುತ್ತಾ ಕುಳಿತು ಬಿಡುತ್ತಿದ್ದನು. ಎಮ್ಮೆಗಳು ತಮ್ಮ ಪಾಡಿಗೆ ತಾವು ಮೇಯ್ದು, ಹಗರಿ ಹಳ್ಳದಲ್ಲಿ ನೀರು ಕುಡಿದು ನೀರಿನಲ್ಲಿಯೇ ಮುಳುಗಿ ಈಜಾಡುತ್ತಿದ್ದವು. ಸಾಯಂಕಾಲವಾದ ಮೇಲೆ ಅವುಗಳನ್ನು ಹೊಡೆದುಕೊಂಡು ಬರುತ್ತಿದ್ದನು. ಬಹಳ ದಿನಗಳ ಕಾಲ ಹೀಗೆಯೆ ನಡೆಯಿತು. ಒಮ್ಮೆ ಬಸವೇಶ್ವರ ದೇವಸ್ಥಾನದ ಮುಂದಿನ ಹೊಲದಲ್ಲಿ ಚೆನ್ನಜ್ಜನು ಹಸಿಕಡಲೆಯನ್ನು ಬೆಳೆದಿದ್ದನು. ಬೆಳೆಯು ತುಂಬಾ ದಟ್ಟವಾಗಿ ಬೆಳೆದು ಕಾಯಿಯಿಂದ ತುಂಬಿತ್ತು. ಹೀಗಿರುವಾಗ ಕೊರಿಬೀಡಿಯು ಎಂದಿನಂತೆ ದೇವಸ್ಥಾನದಲ್ಲಿ ಎಮ್ಮೆಗಳನ್ನು ಮೇಯಲು ಬಿಟ್ಟು ಬೀಡಿ ಸೇದುತ್ತಾ ಕುಳಿತಿದ್ದನು. ಎಮ್ಮೆಗಳೆಲ್ಲ ಕಡಲೆಯ ಬೆಳೆಯನ್ನು ತಿಂದು ಹಾಳು ಮಾಡಿದ್ದವು. ಚೆನ್ನಜ್ಜನು ಇದನ್ನು ಕಂಡು ಮನೆಯಾಳುಗಳಾದ ಕರಿಯ, ಮರಿಯ, ದುರ್ಗನನ್ನು ಕರೆದು ಎಮ್ಮೆಗಳನ್ನು ಹೊಡೆಸಿಕೊಂಡು ಬಂದು ಎಮ್ಮೆಗಳನ್ನು ಕೊಂದು ತಿಂದುಬಿಡಿ ಎಂದು ಹೇಳಿದನು. ಇದನ್ನು ತಿಳಿದ ಕಸ್ತೂರಮ್ಮನು ಎಮ್ಮೆಗಳನ್ನು ಯಾಕಾದರೂ ಕೊಂದು ತಿನ್ನಲಿ ಗೌಡ್ರೇ ನನಗೆ ಎಮ್ಮೆಯ ಚರ್ಮವನ್ನಾದರೂ ಕೊಡಿ ಪಟ್ಟಣಕ್ಕೆ ಹೋಗಿ ಮಾರಿಕೊಂಡು ಜೀವನ ಸಾಗಿಸುತ್ತೇನೆ ಎಂದು ಕೇಳಿಕೊಂಡಳು. ಚೆನ್ನಜ್ಜನು ಆಗಲಿ ಎಂದು ಎಮ್ಮೆಯ ಚರ್ಮವನ್ನು ಕೊಟ್ಟು ಕಳುಹಿಸಿದನು.

ಎಮ್ಮೆಯ ಚರ್ಮವನ್ನು ಪಟ್ಟಣಕ್ಕೆ ಹೋಗಿ ಮಾರಿಕೊಂಡು ಬರುವಂತೆ ಕೋರಿಬೀಡಿಗೆ ಕಸ್ತೂರಮ್ಮನು ಹೇಳಿದಳು. ಆಗ ಕೋರಿಬೀಡಿಯು ಆಯಿತು ಎಂದು ನಾಲ್ಕಾರು ಎಮ್ಮೆಗಳ ಚರ್ಮವನ್ನು ತೆಗೆದುಕೊಂಡು ಆದಿನ ರಾತ್ರಿಯಾಗಿತ್ತಾದ್ದರಿಂದ ಬೆಳಗಿನ ಜಾವ ಎದ್ದು ಪಟ್ಟಣಕ್ಕೆ ಹೋಗಿ ಮಾರಿಕೊಂಡು ಬಂದರಾಯ್ತು ಎಂದು ಕೋಗಳಿ ಆಂಜನೇಯನ ಗುಡಿಯಲ್ಲಿರುವ ಗ್ಯೋವಿನ ಮರಕ್ಕೆ ನೇತು ಹಾಕಿ (ಮರವು ಈಗ ಇಲ್ಲ) ಮಲಗಿದ್ದನು. ಆದಿನ ರಾತ್ರಿಯೇ ಪಕ್ಕದ ಹಳ್ಳಿಯ ಧನಿಕನ ಮನೆಯಲ್ಲಿ ನಾಲ್ಕಾರು ಜನ ಕಳ್ಳರು ಕಳವು ಮಾಡಿಕೊಂಡು ಬಂದು

ಆಂಜನೇಯನ ಗುಡಿಯ ಹಿಂಭಾಗದಲ್ಲಿ ಹಂಚಿಕೊಳ್ಳುತ್ತಿದ್ದರು. ಆವ್ಯಾಳೆಗೆ ಗೋವಿನ ಮರಕ್ಕೆ ನೇತು ಹಾಕಿದ ಚರ್ಮಗಳು ಗಾಳಿಗೆ ಪಟಪಟನೆ ಬಡಿದುಕೊಂಡವು. ಆ ಶಬ್ದವನ್ನು ಕೇಳಿದ ಕಳ್ಳರು ನಮ್ಮನ್ನು ಬಂದಿಸಲು ಯಾರೋ ಬಂದಿರಬೇಕು ಎಂದು ಕೈಗೆ ಸಿಕ್ಕಷ್ಟುನ್ನು ಹೊತ್ತುಕೊಂಡು ಅಲ್ಲಿಂದ ಓಡಿ ಹೋದರು. ಇನ್ನು ಬಹಳಷ್ಟು ನಿಧಿಯನ್ನು ಅಲ್ಲೆ ಬಿಟ್ಟು ಹೋಗಿದ್ದರು. ಈ ಕಡೆ ಬೆಳಗಿನ ಜಾವ ಬೇಗ ಎದ್ದು ಸಂತೆಗೆ ಹೋಗಬೇಕು ಎಂದು ಎದ್ದು ಕಾಲುಮಡಿಯಲು (ಮೂತ್ರವಿಸರ್ಜನೆಗೆ) ಗುಡಿಯ ಹಿಂಭಾಗಕ್ಕೆ ಕೊರಿಬೀಡಿಯು ಹೋದನು. ಅಲ್ಲಿಯೇ ಬಿದ್ದಂತಹ ಬಹಳಷ್ಟು ಹಣವನ್ನು ಬೆಳ್ಳಿ, ಬಂಗಾರವನ್ನು ಕಂಡ ಕೊರಿಬೀಡಿಯು ನಾನಿದನೆಲ್ಲವ ಕೊಂಡು ಒಯ್ದು ಕಸ್ತೂರವ್ವಗೆ ಕೊಟ್ಟರೆ ಎಮ್ಮೆಯನ್ನು ಕಳೆದುಕೊಂಡ ಕಸ್ತೂರವ್ವನು ಸಂತೋಷಗೊಳ್ಳುತ್ತಾಳೆಂದು ಬಗೆದು ಎಲ್ಲವನ್ನು ಹೊತ್ತುಕೊಂಡು ಹೋಗಿ ಆಕೆಗೆ ಕೊಟ್ಟನು. ಸಂತೋಷಗೊಂಡ ಕಸ್ತೂರವ್ವ ಅದರಲ್ಲಿನ ಒಂದು ಭಾಗವನ್ನು ಕೊರಿಬೀಡಿಗೆ ಕೊಟ್ಟಳು. ಆಗ ಕೋಗಳಿಯಲ್ಲಿ ಕಸ್ತೂರವ್ವ ಮತ್ತು ಕೊರಿಬೀಡಿಯು ಸಂತೋಷದಿಂದ ಕಾಲ ಕಳೆಯುತ್ತಿದ್ದರು. ನಾವು ಇಲ್ಲಿ ಕಥೆಯನ್ನು ಹೇಳುತ್ತಾ, ಕೇಳುತ್ತಾ ಕಾಲ ಕಳೆಯುತ್ತಿದ್ದೇವೆ ಎಂದು ಕಥೆಯನ್ನು ಊರಿನ ದೇವಿರಮ್ಮ ಮುಗಿಸುತ್ತಾಳೆ. ಇದರಿಂದ ಕೋಗಳಿಯ ಆಂಜನೇಯನು ನಂಬದವರನ್ನು ಕೈಬಿಡನು. ಮತ್ತು ಕರ್ತವ್ಯ ನಿಷ್ಟ ಶ್ರಮ ಜೀವಿಗಳನ್ನು ಯಾವ ಮುಖಾಂತರವಾದರು ಕಾಯುತ್ತಾನೆ ಎನ್ನುವುದು ತಿಳಿಯುತ್ತದೆ. ಅಲ್ಲಿಯ ಜನರ ನಂಬಿಕೆಯು ಇದಾಗಿದೆ.

**ಗಾದೆ**

ಗಾದೆ ವೇದಕ್ಕೆ ಸಮಾನ ಎಂಬುದು ಬಹುಜನವೇದ್ಯವಾದ ಮಾತು. ವೇದ ಎಂಬುದೊಂದು ಪವಿತ್ರಗ್ರಂಥ. ಆ ಅರ್ಥದಲ್ಲಿ ಈ ಮಾತನ್ನು ಬೈಬಲ್ಲು, ಕುರಾನುಗಳಿಗೂ ಅನ್ವಯಿಸಬಹುದು. ಅದು ಪ್ರಭು ಸಮ್ಮಿತ ವಿಧಾನದಲ್ಲಿ ಜನತೆಯನ್ನು ತಿದ್ದುತ್ತದೆ ಎಂದು ಹಿರಿಯರು ಹೇಳುತ್ತಾರೆ. ಆಯಾಯ ಜನಾಂಗಗಳನ್ನು ರೂಪಿಸುವಲ್ಲಿ ಈ ಪವಿತ್ರಗ್ರಂಥಗಳ ಪಾತ್ರ ಮಹತ್ವಪೂರ್ಣವಾದದ್ದು. ವೇದದಂತೆಯೇ ಗಾದೆಯು ನೀತಿ ಪ್ರಧಾನವಾದ ಉಪದೇಶಾತ್ಮಕವಾದ ಸತ್ಯ ನಿಷ್ಟವಾದ ರಚನೆ. ಒಂದು ದೃಷ್ಟಿಯಲ್ಲಿ ಗಾದೆಯು ವೇದಕ್ಕಿಂತ ಮಿಗಿಲಾದುದು. ವೇದವು ಕೆಲವರ ಸ್ವತ್ತಾದರೆ ಗಾದೆಯು ಹಲವರ ಸ್ವತ್ತು. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಲೋಕೋಕ್ತಿ ಗಾದೆಗೆ ಅಗ್ರಸ್ಥಾನ ನೀಡುತ್ತಿದೆ. ಈ ಹಿನ್ನೆಲೆಯಲ್ಲಿ ಆಂಜನೇಯನಿಗೆ ಸಂಬಂದಿಸಿದಂತೆ

ಊರು ಸುಟ್ಟರೂ ಹನುಮಪ್ಪ ಸುಡನು
ಊರು ಸುಟ್ಟರೂ ಹನುಮಪ್ಪ ಊರ ಹೊರಗೆ
ಊರು ಸುಟ್ಟರೂ ಹನುಮನ ಬಾಲ ಸುಡಲಿಲ್ಲ.
ಊರಿಗೊಬ್ಬನೇ ಹನುಮಪ್ಪ
ಊರಿದ್ದರೇ ಹನುಮಪ್ಪ ಇದ್ದೇ ಇರುತ್ತಾನೆ
ಕೇರಿಗೊಬ್ಬ ಹನುಮಪ್ಪ ನೀರಿಗೊಂದು ಕೆರೆ
ಹಾಳೂರಿಗೆ ಉಳಿದವನೆ ಹನುಮಪ್ಪ

ಹಳ್ಳಿಗೆ ಹನುಮಪ್ಪ ಚಂದ

ಹನುಮಪ್ಪನು ಇರದ ಊರೇ ಇಲ್ಲ

ಇತ್ಯಾದಿ ಗಾದೆಗಳು ಹನುಮಪ್ಪನನ್ನು ಕುರಿತಾಗಿ ನಮ್ಮ ಜನಪದರಲ್ಲಿ ಇವೆ.

**ಐತಿಹ್ಯ**

ವಾಸ್ತವವಾಗಿ ನಡೆದಿದೆ ಎಂದು ನಂಬಿಕೊಂಡು ಬಂದಿರುವ ಅಸಾಮಾನ್ಯ ಘಟನೆಯೊಂದರ ಸುತ್ತ ಹೆಣೆದಿರುವ ಕಥೆಯೇ ಐತಿಹ್ಯವೆನಿಸುತ್ತದೆ. ಪ್ರಾಚೀನ ಕಾಲದ ಯಾವುದೋ ಒಂದು ಸಣ್ಣ ಚಾರಿತ್ರಿಕ ಘಟನೆಯ ಸುತ್ತ ಪರಂಪರಾಗತವಾಗಿ ಬಂದಿರಬಹುದಾದ ಸನ್ನಿವೇಶಗಳು ಬೆಳೆದು ತಲೆಮಾರುಗಳ ಮೂಲಕ ಹರಿದು ಬರುವಾಗ ಕಥೆಯಾಗಿ ರೂಪಾಂತರಗೊಂಡರೆ ಅಂತಹವನ್ನು ಐತಿಹ್ಯವೆನ್ನಲಾಗುತ್ತದೆ. ಇದು ನಿರ್ಧಿಷ್ಟ ಸ್ಥಳ, ವ್ಯಕ್ತಿ, ಧಾರ್ಮಿಕ, ಸಾಮಾಜಿಕ ಅಂಶಗಳ ಸುತ್ತ ಹೆಣೆದುಕೊಂಡಿರುತ್ತದೆ. ಅಂದರೆ ರಾಮಾಯಣ, ಮಹಾಭಾರತದಂತಹ ಪುರಾಣ ಸಂಬಂಧಿ ವಿವರಗಳು ಕೂಡ ಐತಿಹ್ಯದ ತೆಕ್ಕೆಗೆ ಬರುವ ಸಾಧ್ಯತೆಗಳು ಇವೆ.

ಐತಿಹ್ಯ ಪದವನ್ನು Legend ಎಂಬ ಇಂಗ್ಲೀಷ್ ಪದದ ಸಂವಾದಿಯಾಗಿ ಉಲ್ಲೇಖಿಸಲಾಗುತ್ತದೆ. ಇದು ಮೂಲತಃ ಧಾರ್ಮಿಕ ರೀತಿಯ ಕಥನಕ್ಕೆ ಬಳಕೆಯಾಗುತ್ತಿತ್ತು. ಅಂದರೆ ಸಾಧು (ನಿರ್ಲಿಪ್ತ, ನಿರ್ವಿಕಾರ, ನಿರಹಂಕಾರ) ಜೀವನ ಅಥವಾ ಅಂಥ ಕಥೆಗಳ ಸಂಗ್ರಹವನ್ನು ಸೂಚಿಸುತ್ತಿದ್ದಂತೆ ತೋರುತ್ತದೆ. ಈ ಎಲ್ಲಾ ವಿವರಗಳನ್ನು ಗಮನಿಸಿದಾಗ ಐತಿಹ್ಯದ ಅರ್ಥವ್ಯಾಪ್ತಿಯು ನಿಘಂಟುಗಳಲ್ಲಿರುವದಕ್ಕಿಂತ, ಸ್ವಲ್ಪಮಟ್ಟಿಗೆ ಬೇರೆಯೇ ಆಗಿರುವ ಸೂಚನೆಗಳು ಕಂಡು ಬರುತ್ತವೆ. ನಾಚಿರಾಜನ ಪ್ರಕಾರ ಐತಿಹ್ಯಕ್ಕೆ ಪ್ರಮಾಣಬೇಡ. ನಿಜಗುಣ ಶಿವಯೋಗಿಯ ಪ್ರಕಾರ ಲೋಕವಾರ್ತೆಯೇ ಐತಿಹ್ಯಕ್ಕೆ ಪ್ರಮಾಣ (ಕರ್ನಾಟಕ ಜಾನಪದ ಕೈಪಿಡಿ;ಪು.೨೭) ಸುಮಾರು ೧೪-೧೫ನೇ ಶತಮಾನದಲ್ಲಿ ಇಂತಹ ಚರ್ಚೆಗಳು ನಡೆದವು. ಇಂಗ್ಲೀಷ್‌ಗಿಂತ ಮೊದಲೇ ನಮ್ಮಲ್ಲಿ ಐತಿಹ್ಯದ ಕಲ್ಪನೆ ಮೂಡಿರುವುದು ಖಚಿತವಾಗುತ್ತದೆ.

ಐತಿಹ್ಯ ೨

ಕಿವಿಯಿಂದ ಕಿವಿಗೆ ಹರಿದು ಬಂದ, ಜನಪ್ರಿಯವೂ, ನಂಬುವಂತೆಯೂ ಇರುವ ಘಟನೆಯನ್ನು ಜನರು ಐತಿಹ್ಯವೆಂದು ಕರೆಯಲಾರಂಭಿಸಿದರು. ಸತ್ಯದ ಶೋಧನೆಗೆ ಐತಿಹ್ಯ ಪ್ರಮಾಣವಾಗಬಲ್ಲದು. ಚರಿತ್ರೆ ಮೌನವಾಗಿರುವಲ್ಲಿ ಜನಪದರು ಐತಿಹ್ಯಗಳ ಮೂಲಕ ವಿವರಗಳನ್ನು ಕಟ್ಟಿಕೊಡುತ್ತಾರೆ. ಇದು ಐತಿಹ್ಯಗಳ ಬಹುಮುಖ್ಯ ಕಾರ್ಯ.

ಇಂತಹ ಹಲವಾರು ಐತಿಹ್ಯದಿಂದ ಕಥೆಗಳು ಕರ್ನಾಟಕದಾದ್ಯಂತ ಎಲ್ಲಾ ದೇವತೆಗಳನ್ನು ಕುರಿತಾಗಿ ಪ್ರಚಲಿದಲ್ಲಿವೆ. ಇದಕ್ಕೆ ಪೂರಕವಾಗಿಯೂ ಕೋಗಳಿಯ ಆಂಜನೇಯನ ಕುರಿತ ಐತಿಹ್ಯಗಳು ಉಂಟು.

ಒಮ್ಮೆ ಊರಿನಲ್ಲಿ ಕಾಲರದಿಂದ ಬಹಳಷ್ಟು ಜನರು ಸಾಯಲು ಆ ಊರಿನ ಮುಖಂಡರು ಪರಸ್ಪರ ಮಾತಾಡಿಕೊಂಡು ಹನುಮಪ್ಪನ ಪೂಜೆಯನ್ನು ಅರ್ಚಕರಿಂದ ಮಾಡಿಸಿ, ಬೆಳಗಾಗುವುದರೊಳಗೆ ಜನರು ರೋಗದಿಂದ ಗುಣಮುಖರಾಗಿ ಮೊದಲ ಸ್ಥಿತಿಗೆ ಬರದತನಕ ಇಲ್ಲಿಂದ ನಾವುಗಳು ಮೇಲೇಳುವುದಿಲ್ಲವೆಂದು ಬಲಗಡೆಯ ಹೂವನ್ನು ಕೊಡುವಂತೆ ಆಂಜನೇಯನಲ್ಲಿ ಬೇಡಿಕೆಯನ್ನು ಇತ್ತು. ವಿವಿಧ ರೀತಿಯಲ್ಲಿ ಆತನನ್ನು ಬೇಡುತ್ತಾ ಕುಳಿತಾಗ ಸುಮಾರು ಮಧ್ಯರಾತ್ರಿಯ ಸುಮಾರಿಗೆ ಆಂಜನೇಯನು ಬಲಗಡೆಯ ಹೂವನ್ನು ಕೊಡುತ್ತಾನೆ. ಗ್ರಾಮಸ್ಥರು ಪೂಜೆಗೆ ಕುಳಿತು ಆಂಜನೇಯ ಹೂವನ್ನು ಕೊಡುವ ತನಕ ಒಂದೆರಡು ಹೆಣಗಳು ಬಿದ್ದಿದ್ದವಷ್ಟೇ. ಅದೂ ಅಸಹಾಯಕರಾಗಿರುವ ಮತ್ತು ತಮ್ಮ ತಮ್ಮ ದಿನ ನಿತ್ಯದ ಕ್ರಿಯೆಗಳನ್ನು ಮಾಡಿಕೊಳ್ಳಲಾಗದ ವೃದ್ಧರೂ, ಅಂಗವಿಕಲರೂ ಆ ಹೆಣಗಳು, ಇದರಿಂದ ಅಲ್ಲಿಯ ಜನರಿಗೆ ಆಂಜನೇಯನು ಕಷ್ಟಕಾಲಕ್ಕೆ ತಲೆ ಕಾಯುತ್ತಾನೆ ಎನ್ನುವುದು ಗಟ್ಟಿಗೊಂಡಂತಿದೆ.

೨ : ಕೋಗಳಿ ಗ್ರಾಮಕ್ಕೆ ಪಶ್ಚಿಮದಲ್ಲಿ ಇರುವ ದಿಬ್ಬದಹಳ್ಳಿ ಮತ್ತು ಕನ್ನಿಹಳ್ಳಿ ನಡುವೆ ಒಂದು ದಿಬ್ಬದಲ್ಲಿ ಬಯಲು ಆಂಜನೇಯನಿದ್ದಾನೆ. ಅಲ್ಲಿಯ ಪ್ರದೇಶವೆಲ್ಲವೂ ಕಪ್ಪುಮಣ್ಣಿನಿಂದ ಕೂಡಿದ್ದು, ಅಲ್ಲಿ ಬೆಳೆಯುವ ಗೋದಿ, ಬಿಳಿಜೋಳ, ಮತ್ತು ಸೂರ್ಯಕಾಂತಿ, ಹತ್ತಿ, ಹಸಿಕಡಲೆಯನ್ನು ರಾತ್ರೋರಾತ್ರಿ ಊರಮ್ಮನಿಗೆ ಬಿಟ್ಟ ಕೋಣವೊಂದು ಮತ್ತು ಅದರ ಜೊತೆಗೆ ಬಿಡದಿ ದನಗಳು ಬೆಳೆಯನ್ನು ತಿಂದು ಬಿಡುತ್ತಿದ್ದವು. ಆಗ ಅಲ್ಲಿನ ಸುತ್ತಮುತ್ತಲಿನ ಜನರು ಏನು ಮಾಡಲು ತೋಚದೆ ರಾತ್ರಿ ಕಾವಲು ಕಾಯಲು ಸುತ್ತಲು ಮೂರು ಊರುಗಳ ಜನರು ಸರದಿಯ ಪ್ರಕಾರ ಬೆಳೆಗಳನ್ನು, ದನಗಳು, ಕೋಣದಿಂದ ಕಾಪಾಡಲು ಪ್ರಾರಂಭಿಸಿದರು.

ಒಂದು ದಿನ ಇದ್ದಕ್ಕಿದ್ದ ಹಾಗೆ ಸರದಿಯು ಮಕ್ಕಳಿಲ್ಲದ ಒಬ್ಬ ಸ್ತ್ರೀಗೆ ಬಂದಿತ್ತಂತೆ. ಆದಿನ ಆಕೆ ರಾತ್ರಿ ಹೊಲವನ್ನು ಕಾಯಲು ಸರದಿಯವರ ಜೊತೆಗೆ ಕೂಡಿ ಹೋಗಿದ್ದಾಗ ನನಗೆ ಒಬ್ಬ ಮಗನಿದ್ದರೆ ಅವನೇ ನಿಮ್ಮ ಜೊತೆಗೆ ಹೊಲವನ್ನು ಕಾಯಲು ಬರುತ್ತಿದ್ದನು ಎಂದು ಜೊತೆಯಲ್ಲಿರುವವರಿಗೆ ಹೇಳಿದಳು. ಅದಕ್ಕೆ ಪ್ರತಿಯಾಗಿ ನಾಳೆಯ ದಿನ ನೀನು ಬರುವುದು ಬೇಡ ನಾನೇ ಕಾಯುತ್ತೇನೆ ಎನ್ನುವ ಧ್ವನಿಯು ಕೇಳಿಸಿದಂತೆ ಆಕೆಗೆ ಅನಿಸಿತು ಮಾರನೆಯ ದಿನ ಅಲ್ಲಿ ದಿಬ್ಬದ ಮೇಲೆ ಹನುಮನ ಆಕೃತಿಯನ್ನು ಹೋಲುವ ಕಲ್ಲುಬಂಡೆ ಕಂಡು ಅಲ್ಲಿ ಬಯಲು ಹನುಮಪ್ಪ ಈತ ಎಂದು ಅಂದಿನಿಂದ ಇಂದಿನವರೆಗೂ ಪೂಜಿಸುತ್ತಾ ಬಂದಿದ್ದಾರೆ. ಬಯಲು ಹನುಮಪ್ಪನನ್ನು ಪೂಜೆ ಮಾಡಿಕೊಂಡು ಎಡೆಯನ್ನು ಒಪ್ಪಿಸಿದ ನಂತರವೇ ಕೋಗಳಿಯಲ್ಲಿ ಆಂಜನೇಯನ ಮುಳ್ಳುಪವಾಡ ಜರುಗುವುದು.

# ಅಧ್ಯಾಯ – ೭

## ಪ್ರದರ್ಶನ ಕಲೆಗಳು

ಕರ್ನಾಟಕದ ಯಾವ ಗ್ರಾಮ ಅಥವಾ ಹಳ್ಳಿಗಳಲ್ಲಿಯೇ ಆಗಲಿ ಜಾತ್ರೆ, ಹಬ್ಬ, ರಥೋತ್ಸವದಂತಹ ಆಚರಣೆಗಳು ಜರುಗುತ್ತವೆ ಎಂದಾದರೆ ಅಲ್ಲಿ ಪ್ರದರ್ಶನ ಕಲೆಗಳಿಗೆ ತುಂಬಾನೆ ಮಹತ್ವವಿರುತ್ತದೆ. ಜಾತ್ರೆಗಳು ಇದ್ದಲ್ಲಿ ಪ್ರದರ್ಶನ ಕಲೆಗಳು ಇದ್ದೇ ಇರುತ್ತವೆ. ಹಿಂದಿನ ಕಾಲದಿಂದಲೂ ಹಬ್ಬ, ಜಾತ್ರೆ, ಉತ್ಸವದಂತಹ ಸಂದರ್ಭಗಳು ಆ ಗ್ರಾಮದ ಸುತ್ತಮುತ್ತಲಿನ ಗ್ರಾಮದವರು, ಬಂದುಗಳು, ಬಳಗದವರು ವಾರಗಟ್ಟಲೇ ಒಂದೆಡೆ ಸೇರಿ ಆಚರಿಸುತ್ತಾ ಬಂದಿರುವ ಸಂದರ್ಭದಲ್ಲಿ ಪ್ರದರ್ಶನ ಕಲೆಗಳಿಗೆ ಕಲೆಯು ನೋಡುವ ಮತ್ತು ಕೇಳುವ ಮತ್ತು ಪ್ರದರ್ಶಕನ ನಡುವಿನ ಬಂಧವಾಗಿರುವುದರಿಂದ ಜಾತ್ರೆಗಳಲ್ಲಿ ಬಹಳ ಜನರು ಒಂದೆಡೆ ಸೇರಿರುತ್ತಾರೆ. ರಾತ್ರಿ ಕಳೆಯುವುದು ಕಷ್ಟವಾದಲ್ಲಿ ಇಂತಹ ಕಲೆಗಳು ಹುಟ್ಟಿಕೊಂಡಿರಬೇಕು. ಇದು ಬೆಳೆದು ದೊಡ್ಡದಾಗಿ ಗ್ರಾಮೀಣ ಪ್ರದೇಶಗಳಲ್ಲಿ ಇಂತಹ ಪ್ರದರ್ಶನ ಕಲೆಗಳಾದ, ಬಯಲಾಟ, ಸಣ್ಣಾಟ, ದೊಡ್ಡಾಟ, ನಾಟಕ, ಕುಸ್ತಿ ಪಂದ್ಯಗಳು, ಡೊಳ್ಳಿನ ಕುಣಿತ, ಕೋಲಾಟ, ಮುಂತಾದವುಗಳು ತಮ್ಮ ಸ್ಥಾನವನ್ನು ಗಟ್ಟಿಗೊಳಿಸಿಕೊಂಡು ಬಂದಿವೆ. ಈ ಎಲ್ಲಾ ಸಂದರ್ಭಗಳಲ್ಲೂ ಹೆಣ್ಣು–ಗಂಡುಗಳು ಭಾಗವಹಿಸಿ ಮನೋರಂಜನೆಯನ್ನು ಪಡೆದಿರಬೇಕು, ಪಡೆಯುತ್ತಲಿದ್ದಾರೆ. ಕೋಗಳಿ ಗ್ರಾಮದಲ್ಲಿ ಯಾವುದೇ ಹಬ್ಬವಿದ್ದರೂ ಒಂದೊಂದು ನಾಟಕವಂತೂ ಇಂದು ಪ್ರದರ್ಶನಗೊಳ್ಳುತ್ತಿವೆ.

**ಬಯಲಾಟ**

ಬಯಲಿನಲ್ಲಿ ಆಟವನ್ನು ಆಡುವುದರಿಂದ ಬಯಲಾಟ ಎಂಬ ಹೆಸರು ಬಂದಿದೆ. ಹಿಂದಿನ ಕಾಲದಲ್ಲಿ ಯಾವುದೇ ರೀತಿಯ ತಾಂತ್ರಿಕ ಪರಿಕರಗಳು ಇರದಕಾರಣ, ಬಯಲಿನಲ್ಲಿಯೇ ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಘಟನಾವಳಿಗಳನ್ನು ಸ್ತ್ರೀಪುರುಷರು ಒಟ್ಟಾಗಿ ಆಡಿ ತೋರಿಸಿದ್ದುದು ಬಯಲಾಟವಾಗಿದೆ. ಬಯಲಾಟವು ಇಡೀ ರಾತ್ರಿ ನಡೆಯುವ ಒಂದು ಸಂಪ್ರದಾಯ ಕಲೆಯಾಗಿರುವುದರಿಂದ ನೋಡುಗರಿಗೆ ಬೇಸರಬಾರದಂತೆ ವಿವಿಧ ಬಗೆಯ ಕಲಾಪ್ರಕಾರಗಳು ಅದರಲ್ಲಿ ಮೇಳೈಸುತ್ತವೆ. ಬಯಲಾಟದಲ್ಲಿ ಹಾಡು ಕುಣಿತ, ಮಾತು ಮುಖ್ಯ ಅಂಗಗಳಾಗಿ ಕಂಡು ಬರುತ್ತವೆ. ಬಯಲಾಟದಲ್ಲಿ ಸಂಭಾಷಣೆಯು ಎಷ್ಟು ಮುಖ್ಯವಾಗಿದ್ದರೂ ಅದು ಸಂಗೀತದ ಕೆಲಸವನ್ನು ಮಾಡಲಾರದು. ಇದರಲ್ಲಿ ಸಂಭಾಷಣೆಯ ಜೊತೆ ಸಂಗೀತ, ಹಿಮ್ಮೇಳ ಸೇರಿಕೊಂಡು ಏಕಾಂತದ ಬೇಸರವನ್ನು ಕಳೆಯುತ್ತವೆ. ಬಯಲು ನಾಟಕಗಳಲ್ಲಿ ಹರಿಜನರು ನಾಟಕ ಸಂಘ ಕಟ್ಟಿಕೊಂಡು ಸಂಗ್ಯಾಬಾಳ್ಯ, ಕನಕಾಂಗಿ, ಪ್ರಮೀಳ ದರ್ಭಾರು, ಚಿತ್ರಕೇತು ಮಹಾರಾಜ, ರತಿಕಲ್ಯಾಣ ಮುಂತಾದ ನಾಟಕಗಳನ್ನು ಅನಾದಿಕಾಲದಿಂದಲೂ ಹಬ್ಬ ಜಾತ್ರೆ, ಯುಗಾದಿಯ ಸಂದರ್ಭದಲ್ಲಿ ಪ್ರದರ್ಶಿಸುತ್ತಲೇ ಬಂದಿದ್ದಾರೆ. ಹಾಗೆಯೇ ಊರಲ್ಲಿಯು ಎಲ್ಲಾ ಸಮಾಜದ ಜನರು ಕೂಡಿ ನಾಟಕ ಸಂಘವನ್ನು ನಿರ್ಮಿಸಿಕೊಂಡು– ಅಕ್ಷಯಾಂಬರ, ಪ್ರಪಂಚ ಪರೀಕ್ಷೆ, ರಾಮಾಯಣ, ಸಂಗ್ಯಾಬಾಳ್ಯದಂತಹ ನಾಟಕಗಳನ್ನು ಮೊದಲಿಗೆ

ಬಯಲಿನಲ್ಲಿಯೇ ಪ್ರದರ್ಶಿಸುತ್ತಿದ್ದರು. ಪುರುಷರೇ ಸ್ತ್ರೀ ಪಾತ್ರ ಮಾಡುವುದರ ಮುಖಾಂತರ ಬಯಲು ನಾಟಕಗಳನ್ನು ಪ್ರದರ್ಶನ ಮಾಡುತ್ತಲೆ ಬಂದಿದ್ದಾರೆ.

**ನಾಟಕ**

ಕನ್ನಡ ರಂಗಭೂಮಿಗೆ ತನ್ನದೇ ಆದ ಕೊಡುಗೆಯನ್ನು ನೀಡಿದ ಬಳ್ಳಾರಿ ಜಿಲ್ಲೆಯ ಕೋಗಳಿ ಗ್ರಾಮದಲ್ಲಿ ಕಲೆ, ಸಂಗೀತ, ನೃತ್ಯಕ್ಕೆ ಹೆಸರುವಾಸಿಯಾದವರು ಇಂದಿಗೂ ಆ ನಾಡಿನಲ್ಲಿ ಕಾಣಸಿಗುತ್ತಾರೆ. ನಾಟಕದ ಹಲವಾರು ಕಲಾವಿದರು ಕೋಗಳಿಯಲ್ಲಿ ಇದ್ದಾರೆ. ಅವರಲ್ಲಿ ಮೂರು ನಾಲ್ಕು ದಶಕಗಳಿಂದಲೂ ನಾಟಕ ರಂಗಕ್ಕೆ ತಮ್ಮ ಪ್ರಾಣವನ್ನು ಮುಡಿಪಾಗಿಟ್ಟು ಸೇವೆಯನ್ನು ಮಾಡುತ್ತಾ ಬಂದಿರುವ ಪಂಪಣ್ಣ ಕೋಗಳಿಯವರೇ ಸಾಕ್ಷಿ. ಹಿಂದಿನ ಕಾಲದಿಂದಲೂ ಹಬ್ಬ, ಜಾತ್ರೆ, ಸಂಪ್ರದಾಯ, ಆಚರಣೆ ಈ ಎಲ್ಲಾ ಸಂದರ್ಭದಲ್ಲೂ ಮನೋರಂಜನೆಗಾಗಿ ನಾಟಕಗಳನ್ನು ಪ್ರದರ್ಶಿಸುತ್ತಾ ಬಂದಿದ್ದಾರೆ. ಮಾತಂಗ ಕನ್ಯೆ, ದೇವದಾಸಿ, ರಕ್ತರಾತ್ರಿ, ದ್ರೌಪದಿ ಸ್ವಯಂವರ, ಅಶ್ವತ್ಥಾಮ, ಹೇಮರೆಡ್ಡಿ ಮಲ್ಲಮ್ಮ ಮುಂತಾದ ನಾಟಕಗಳನ್ನು ಪ್ರದರ್ಶಿಸಿದ್ದಾರೆ.

ಕೋಗಳಿ ಗ್ರಾಮದಲ್ಲಿ ಪ್ರತಿವರ್ಷವೂ ಎಲ್ಲಾ ಹಬ್ಬಗಳಲ್ಲಿಯೂ ಒಂದೊಂದು ನಾಟಕ ಇದ್ದೇ ಇರುತ್ತದೆ. ೧೯೭೬ರ ಸುಮಾರಿಗೆ ಕೋಗಳಿ ಗ್ರಾಮದಲ್ಲಿ ಯುವಕರನ್ನು ಕಟ್ಟಿಕೊಂಡು ಶ್ರೀ ಮಾರುತಿ ನಾಟ್ಯ ಕಲಾ ಸಂಘವನ್ನು ಕಟ್ಟಿಕೊಂಡು (ಇವತ್ತಿಗೂ ಜೀವಂತವಿದೆ) ನಾಟಕಗಳನ್ನು ಆರಂಭಿಸಿದ ಪಂಪಣ್ಣನವರು ನಲವಡಿ ಶ್ರೀಕಂಠ ಶಾಸ್ತ್ರಿಯವರ ಪ್ರಪಂಚ ಪರೀಕ್ಷೆಯಲ್ಲಿ ಭಾನುಮತಿಯ ಪಾತ್ರವನ್ನು ಅಭಿನಯಿಸುವುದರ ಮುಖಾಂತರ ಇಂದು ಕನ್ನಡ ರಂಗಭೂಮಿಯಲ್ಲಿ ಅವರು ಅಭಿನಿಯಿಸಿದ ನಾಟಕಗಳು ಅಷ್ಟಿಷ್ಟಲ್ಲ. ಸಾಮಾಜಿಕ ನಾಟಕಗಳಾದ ಯಾರು ನನ್ನವರು, ಅಣ್ಣ ತಂಗಿ, ಹೆಣ್ಣು ಬೀಸಿದ ಬಲೆ, ಧನಿಕರ ದೌರ್ಜನ್ಯ, ಹುಲಿ ಹೆಬ್ಬುಲಿ, ಯಾರತಪ್ಪು, ಬಾಳ ನೌಕೆ ಮುಂತಾದ ನಾಟಕಗಳನ್ನು ಹಬ್ಬಗಳಲ್ಲಿ ಪ್ರದರ್ಶಿಸುತ್ತಾರೆ.

ದಿ॥ಕಂದಗಲ್ ಹನುಮಂತರಾಯರ ರಕ್ತರಾತ್ರಿ ಎನ್ನುವ ಪೌರಾಣಿಕ ನಾಟಕದ ಭೀಮನ ಪಾತ್ರವನ್ನು ನಿರ್ವಹಿಸುವುದಕ್ಕೆ ಹುಟ್ಟಿದ್ದಾರೋ ಏನೋ ಎನ್ನುವ ಹಾಗೆ ಕೋಗಳಿ ಪಂಪಣ್ಣ ಅದರಲ್ಲಿ ಯಶಸ್ಸುಗಳಿಸಿದ್ದಾರೆ. ಇಂತಹ ನಾಟಕವನ್ನು ಕೋಗಳಿಯಲ್ಲಿ ವರ್ಷಕ್ಕೆ ಒಮ್ಮೆಯಾದರೂ ನವಯುವಕರನ್ನು ಕಟ್ಟಿಕೊಂಡು ಪ್ರದರ್ಶಿಸುತ್ತಲೇ ಬಂದಿದ್ದಾರೆ. ಸಮಾಜವು ಹೆಣ್ಣನ್ನು ಕೀಳು ಭಾವನೆಯಿಂದ ನೋಡುವ ಸಮಯದೊಳಗೆ ಇಲ್ಲಿನ ಹಲವಾರು ಸ್ತ್ರೀಯರು ನಾಟಕಗಳಲ್ಲಿ ಹಿಂದಿನ ಕಾಲದಲ್ಲಿ ಅಭಿನಯಿಸುತ್ತಿದ್ದರು. ಸಾವಿತ್ರಮ್ಮ, ಬಾಗಳಿ ಬಸಮ್ಮ, ಹನುಮಮ್ಮ ಮುಂತಾದ ಕಲಾವಿದರು ಬಹಳ ಯಶಸ್ಸು ಕಂಡವರು.

ಇನ್ನು ನಾಟಕದ ಹಲವಾರು ಕಲಾವಿದರು ಕೋಗಳಿಯಲ್ಲಿ ಇದ್ದಾರೆ. ಅವರಲ್ಲಿ ಪ್ರಮುಖರಾದವರೆಂದರೆ ಕೋಗಳಿ ಪಂಪಣ್ಣ, ಶಂಕ್ರಯ್ಯ, ದೊಡ್ಡಪ್ಪ, ಚಂದ್ರಯ್ಯ, ಚನ್ನವೀರಯ್ಯ, ಕೌಲೂರು ಬಸವರಾಜ (ಈಗ ಇಲ್ಲ) ಹೊಂಬಾಳೆ ಮಂಜಪ್ಪ, ಸುಂಕದ ಕೊಟ್ರೇಶ್, ಹೊಂಬಾಳೆ

ಕೊಟ್ರೇಶಪ್ಪ, ಟಿ. ಶಿವರುದ್ರಪ್ಪ, ಕಮ್ಮಾರ ಕೋಟೆಪ್ಪ, ಮಡಿವಾರರ ವಿರುಪಾಕ್ಷಪ್ಪ, ಕೆಂಚನಾಯ್ಕರ ರಾಮಣ್ಣ, ಬೆಣಕಲ್ಲು ಕೆಂಚಪ್ಪ ಮೊದಲಾದವರು ಇಂದಿಗೂ ನಾಟಕಗಳಲ್ಲಿ ಬಹಳಷ್ಟು ಯಶಸ್ಸು ಮಾಡಿದವರು.

**ಮೊಹರಂ ಪದಗಳು**

ನಾಡಿನ ವಿವಿದ ಕಡೆಯಿಂದ ಮೊಹರಂ ಹಬ್ಬದ ನಂತರ ಹಾಡುಗಾರರನ್ನು ಕರೆಯಿಸಿ ಹಾಡುಗಳನ್ನು ಹೇಳಿಸುವುದು ರೂಢಿಯಲ್ಲಿದೆ. ಆಂಜನೇಯನ ಗುಡಿಯ ಆವರಣದಲ್ಲಿ ಈ ಹಾಡುಗಾರಿಕೆ ನಡೆಯುತ್ತದೆ. ಅಲೆದ ಪದಗಳನ್ನು ಹಾಡುವ ಕಲಾವಿದರು ಕೋಗಳಿಯಲ್ಲಿ ಇದ್ದರಂತೆ. (ಫಕ್ಕೀರಪ್ಪ ಬಿ) ಅವರು ಯಾರು ಈಗ ಇಲ್ಲ. ಆದರೆ ಬೇರೆಡೆಯಿಂದ ಕರೆಸಿ ಹಾಡಿಸುವುದು ರೂಢಿಯಾಗಿ ಬಂದಿದೆ.

**ಕೋಲಾಟ**

ಇದು ಅತ್ಯಂತ ಜನಪ್ರಿಯವಾದ ಮತ್ತು ಮನೋರಂಜಕವಾದ ಕಲೆಯಾಗಿದೆ. ಇದು ಲಯಪ್ರಧಾನವಾದದ್ದು. ಕಾಲಿಗೆ ಗೆಜ್ಜೆಯನ್ನು ಮತ್ತು ಕೋಲಾಟದ ಕೋಲಿನ ತುದಿಗೆ ಗೆಜ್ಜೆಯನ್ನು ಕಟ್ಟಿಕೊಂಡು ಹಾಡುತ್ತಾ, ಕುಣಿಯುತ್ತಾ ಹೋದರೆ ಅಲ್ಲಿ ಹೊರಡುವ ನಿನಾದ ಮೋಹಕವಾಗಿ ಕೇಳಿಸುತ್ತದೆ. ಕಣ್ಣಿಗೆ, ಮನಸ್ಸಿಗೆ ಆನಂದವುಂಟಾಗುತ್ತದೆ. ಈ ಕೋಲಾಟದಲ್ಲಿ ಜನಪದ ದಾಟಿಯ ಹಾಡುಗಳನ್ನು ಕೇಳಬಹುದು. ಒಬ್ಬನ್ನ ಕಟ್ಟಿದ್ದೆ, ಒಬ್ಬನ್ನ ಬಿಟ್ಟಿದ್ದೆ, ಒಬ್ಬನ್ನ ಕರಕೊಂಡು ಹೊಳಗೋದಿ ಮಲ್ಲಿಗೆ ಎನ್ನುವಂತಹ (ಹಸುವಿನ ಹಾಲು) ಒಗಟಿನ ರೂಪದ ಹಾಡನ್ನು ಬಹುಸುಂದರವಾಗಿ ಹಾಡುತ್ತಾರೆ. ಕೋಗಳಿಯ ಹರಿಜನರಾದ ಮರಿಯಪ್ಪ, ದುರುಗಪ್ಪ, ಕೆಂಚಪ್ಪ, ಪ್ರಭು, ಬಸಪ್ಪ, ಮುಂತಾದವರು ಹಬ್ಬದ ದಿನಗಳಲ್ಲಿ ದುರುಗಮ್ಮನ ದೇವಸ್ಥಾನದಿಂದ ಪ್ರಾರಂಭಿಸಿ ಆಂಜನೇಯನ ಗುಡಿಯಲ್ಲಿ ಹಾಡನ್ನು ಹಾಡುತ್ತಾ ಬಂದು ಕುಣಿದು ಕೋಲಾಟದ ಸೇವೆಯನ್ನು ಆಂಜನೇಯನಿಗೆ ಒಪ್ಪಿಸುವರು. ಇಂತಹ ಕೋಲಾಟದ ಪದಗಳನ್ನು ಸುಗ್ಗಿಯ ಸಮಯದಲ್ಲಿಯೂ ಪ್ರದರ್ಶಿಸುತ್ತಾರೆ.

# ಅಧ್ಯಾಯ – ೮
## ಸಮಾರೋಪ

ನಗರೀಕರಣದ ವಾಸನೆಯು ಬಡೆದಿರುವ ಈ ಪ್ರಸ್ತುತ ಸಂದರ್ಭದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿನ ಗ್ರಾಮದೇವತೆಯನ್ನು ಒಂದು ಶಿಸ್ತಿನ ಅಧ್ಯಯನಕ್ಕೆ ಒಳಪಡಿಸುವುದರಿಂದ ಆ ಸಮಾಜ, ಆ ದೈವದ, ಆಊರಿನ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಇಡೀ ಸಮಾಜದ ಮತ್ತು ಇತರೆ ದೇವತೆಗಳನ್ನು ಸ್ವಲ್ಪ ಮಟ್ಟಿಗಾದರೂ ಅಧ್ಯಯನ ಮಾಡಿದಂತಾಗುತ್ತದೆ.

ಆಂಜನೇಯ ಸ್ವಾಮಿಯು ಮೂಲತಃ ದ್ರಾವಿಡದ ದೈವವಾಗಿದ್ದರೂ, ವೈದಿಕರು, ಇಂದೂ ಅನೇಕ ಕಡೆ ಈತನನ್ನು ಆಚರಿಸುವುದು ಗೋಚರಿಸುತ್ತದೆ. ಆಂಜನೇಯನು ಪೌರಾಣಿಕ ಚರಿತ್ರೆಯಂತೆ ಬ್ರಹ್ಮಚಾರಿಯಾಗಿದ್ದರೂ ಇಲ್ಲಿಯ ಒಂದು ಅಧ್ಯಯನದಿಂದ ಆಚರಣೆಯಲ್ಲಿ ಮದುವೆಗೆ ಮುನ್ನ ನಾಯಕ ಜನಾಂಗದವರು ಶಂಕ ಮತ್ತು ಚಕ್ರದ ಮುದ್ರೆಯನ್ನು ಹಾಕಿಸಿಕೊಳ್ಳುವುದು, ಆಂಜನೇಯ ಸ್ವಾಮಿಗೆ ಮಕ್ಕಳಾಗದವರು ಹರಕೆ ಹೊರುವುದು, ಮದುವೆಯ ನಂತರ ಆಂಜನೇಯನ ರಥೋತ್ಸವದ ಕಳಶವನ್ನು ಮಧುಮಕ್ಕಳು ನೋಡುವುದು ಕಡ್ಡಾಯವಾಗಿದೆ. ಈತನಿಗೆ ದೇವದಾಸಿಯನ್ನು ಬಿಡುವ ಸಂಪ್ರದಾಯವು ಇದ್ದು, ಇದು ಮಹತ್ತರ ವಿಷಯವಾಗಿದ್ದರೂ ಈಗ್ಗೆ ಮೂರು–ನಾಲ್ಕು ದಶಕಗಳ ಈಚೆಗೆ ಕೋಗಳಿಯಲ್ಲಿ ದೇವದಾಸಿ ಪದ್ಧತಿಯು ರದ್ದುಗೊಂಡಿದೆ.

ಆಂಜನೇಯನಿಗೆ ಸಂಬಂಧಿಸಿದ ಹಾಗೆ ಹಿಂದಿನ ಕಾಲದಿಂದಲೂ ವಿವಿಧ ರೀತಿಯ ಆಚರಣೆಗಳು ನಡೆದುಕೊಂಡು ಬಂದಿದೆ. ಇಂದಿಗೂ ನಡೆಯುತ್ತಲಿವೆ. ಉತ್ತರ ಕರ್ನಾಟಕದಲ್ಲಿಯಂತೂ ಈತನಿಗೆ ವಿಶೇಷ ಸ್ಥಾನವಿದೆ. ಈತನು ಜಾತಿ–ಜನಾಂಗಗಳ ಭೇದವಿಲ್ಲದೆ ಎಲ್ಲರಿಗೂ ಬೇಕಾದ ದೈವ. ಅದರಲ್ಲಿಯೂ ಹಿಂದುಳಿದ ಜನಾಂಗದವರಾದ ನಾಯಕರಿಗೆ ಈತನೇ ಮನೆದೇವರು. ಗ್ರಾಮದ ಇತರೇ ದೇವರುಗಳಿಗಿಂತ ನಮ್ಮ ಜನಪದರು ಈತನನ್ನೇ ಹೆಚ್ಚು ಪೂಜಿಸುವುದು. ಹನುಮಪ್ಪನಿಗೆ ನಮ್ಮ ಜನಪದರು ನಾಯಕನ ಸ್ಥಾನ ಕೊಟ್ಟಿದ್ದಾರೆ.

ಹನುಮಪ್ಪನನ್ನು ಕುರಿತ ಬಹಳಷ್ಟು ಆಚರಣೆಗಳಲ್ಲಿ ಯುಗಾದಿಯಲ್ಲಿ ನಡೆಯುವ ಮುಳ್ಳು ಪವಾಡಕ್ಕೆ ಹೆಚ್ಚು ಪ್ರಾಶಸ್ತ್ಯವಿದೆ. ಉತ್ತರ ಕರ್ನಾಟಕದ ಬಹಳಷ್ಟು ಊರುಗಳಲ್ಲಿ ಹನುಮಪ್ಪನಿಗೆ ಸಂಬಂಧಿಸಿದಂತೆ ಬ್ಯಾಟಿಗಿಡ, ಮುಳ್ಳುಪವಾಡದಂತಹ ಆಚರಣೆಗಳು ಇಂದಿಗೂ ನಡೆಯುತ್ತಲೇ ಇವೆ. ನಾವು ಇಂದು ಸಮಯದ ಅಭಾವವನ್ನು ಅನುಭವಿಸುತ್ತಿರುವ, ಜಾಗತೀಕರಣಕ್ಕೆ ಒಳಗಾಗಿರುವುದರಿಂದ ಇಂತಹ ಬಹಳಷ್ಟು ಆಚರಣೆಗಳು ಕಡಿಮೆಯಾಗುತ್ತಾ ಬಂದಿವೆ. ಯುಗಾದಿ, ಪಂಚಮಿ, ಮತ್ತು ಮದುವೆ ಮುಂಜಿಗಳಲ್ಲಿ ವಾರಗಟ್ಟಲೆ ಒಂದೆಡೆ ಸೇರಿ ಆಚರಿಸುತ್ತಿರುವಂತಹ ಆಚರಣೆಗಳು, ಕಾರ್ಯಕ್ರಮಗಳು ಇಂದು ಸಂಕುಚಿತಗೊಳ್ಳುತ್ತಿವೆ

ಎನಿಸುತ್ತದೆ. ಇವುಗಳಲ್ಲಿ ಬಹಳಷ್ಟು ಬದಲಾವಣೆ ಇಂದು ಕಂಡು ಬಂದು ಒಂದೆರಡು ದಿನದಲ್ಲಿಯೇ ಮುಗಿಸಿ ಬಿಡುವ ಸ್ಥಿತಿಗೆ ಇಂದು ಜನರು ಬಂದು ನಿಂತಿದ್ದಾರೆ.

ಹೆಜ್ಜೆ ಹೆಜ್ಜೆಗೂ ವೈಜ್ಞಾನಿಕ ದೃಷ್ಟಿಕೋನದಿಂದ ನೋಡುವ ಜನರು ಇಂದು ಮುಳ್ಳು ಪವಾಡದಂತ ಆಚರಣೆಯಲ್ಲಿ ಏನು ಹುರುಳಿಲ್ಲ ಎಂದು ನಂಬಿಕೆಯನ್ನು ಕಳೆದುಕೊಳ್ಳುತ್ತಿರುವ ಸಮಯದಲ್ಲಿ ಪವಾಡ ಮಾಡುವ ವ್ಯಕ್ತಿಯನ್ನು, ಪವಾಡ ಮಾಡುವಂತಹ ಸಮಯದಲ್ಲಿ ಭಕ್ತಿಯಿಂದ, ಗೌರವದಿಂದ ಆತನಿಗೆ ಮೈಮರೆತು ಕೈಮುಗಿಯುವುದನ್ನು ನಾವು ಕಾಣಬಹುದು. ಪವಾಡ ಮಾಡುವಂತಹ ವ್ಯಕ್ತಿಯು ಸಾಕ್ಷಾತ್ ಆಂಜನೇಯನ ಅವತಾರದಂತೆ ಕಂಡರೂ ಆತ ಸಾಮಾಜಿಕ ಜೀವನದೊಳಗೆ ಮದುವೆ, ಮಕ್ಕಳನ್ನು ಹೊಂದಿರುತ್ತಾನೆ. ಮತ್ತು ಆತನಿಗೆ ಕಷ್ಟಗಳು ತಪ್ಪಿದ್ದಲ್ಲ. ಆದರೂ ಕೂಡ ಇಂತಹ ಪವಾಡಗಳನ್ನು ಮಾಡಿಕೊಂಡೆ ಬಂದಿದ್ದಾರೆ. ಈತನು ಸಮಾಜದಲ್ಲಿ ಒಳ್ಳೆಯ ಸ್ಥಾನದಲ್ಲಿರುತ್ತಾನೆ. ಈತನ ಕಟ್ಟ ಪ್ರವೃತ್ತಿಗಳನ್ನು ನಮ್ಮ ಜನಪದರು ಸಹಿಸರು. ಈತನಿಗೆ ಹಲವಾರು ನಿರ್ಭಂದಗಳು ಇರುತ್ತವೆ. ಸಾಮಾನ್ಯವಾದ ದಿನಗಳಲ್ಲಿ ಈತನನ್ನು ಸಾಮಾನ್ಯರಂತೆಯೇ ಕಾಣುತ್ತಾರೆ.

ಕೋಗಳಿಯ ಆಂಜನೇಯನ ಅಧ್ಯಯನಕ್ಕೆ ತೊಡಗಿದಾಗ ಅಲ್ಲಿ ಆ ಊರಿನ ಐತಿಹಾಸಿಕ ಮತ್ತು ಭೌಗೋಳಿಕ ಪರಿಸರ ಪೂರ್ಣ ಪರಿಚಯವು ಆದಂತಾಯಿತು. ಅಲ್ಲದೆ ಅಲ್ಲಿನ ಜನರ ಜನ ಜೀವನ, ಅವನತಿ ಹೊಂದುತ್ತಿರುವ ಗುಡಿ ಕೈಗಾರಿಕೆಗಳು, ಕಲಾವಿದರು, ಹಾಡುಗಾರರು ಮತ್ತು ಆ ಊರಿನ ಬಿಡಿ ಬಿಡಿಯಾದ, ಇಡಿಯಾದ ಪರಿಚಯವು ದೊರೆಯುತ್ತದೆ. ಅಂತೆಯೇ ಈ ಅಧ್ಯಯನದಲ್ಲಿ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಕೋಗಳಿಯ ಹಿನ್ನೆಲೆ, ಐತಿಹಾಸಿಕತೆ, ಭೌಗೋಳಿಕತೆ ಮತ್ತು ಅಲ್ಲಿನ ಆಚರಣೆಗಳಾದ ಜೀವನಾವರ್ತನದ ಆಚರಣೆಗಳು ವಾರ್ಷಿಕಾವರ್ತನದ ಆಚರಣೆಗಳು ಆಂಜನೇಯನ ಪೂಜೆ, ದೇವಸ್ಥಾನದ ಸ್ಥಾಪನೆಯ ವಿವರ ಆಸ್ತಿಪಾಸ್ತಿ, ಆಡಳಿತ, ಮುಂತಾದ ವಿವರಗಳನ್ನು ಕುರಿತು ವಿವರಣೆಯು ದೊರೆಯುತ್ತದೆ.

ಕೋಗಳಿ ಆಂಜನೇಯನ ಸಂಕಥನವನ್ನು ನೋಡಿದರೆ ಇದು ರಾಮಾಯಣದ ಹಲವಾರು ಘಟನಾವಳಿಗಳನ್ನು ವಿವರಿಸುವಂತಹ ಅಂಶಗಳನ್ನು ಒಳಗೊಂಡಿದೆ. ಈ ರೀತಿಯ ಗ್ರಾಮದೇವತೆಗಳ ಆಚರಣಾತ್ಮಾಕ ಅಧ್ಯಯನದಿಂದ ಜನಪದರ ಸತ್ಯಾಂಶಗಳನ್ನು ತಿಳಿಯಬಹುದು. ಆಂಜನೇಯನು ದ್ರಾವಿಡರ ದೈವವಾಗಿದ್ದರೂ ವೈದಿಕರು ಆಚರಿಸುತ್ತಾ ಬಂದಿರುವುದು, ಮುಳ್ಳುಪವಾಡದಂತಹ ಆಚರಣೆಗಳು ಇಂದಿಗೂ ಜೀವಂತವಿರುವುದು, ಆಂಜನೇಯನು ಬ್ರಹ್ಮಚಾರಿಯಾಗಿದ್ದರೂ ಮದುವೆಯಲ್ಲಿ ಈತನಿಗೆ ವಿಶೇಷಸ್ಥಾನ, ಮದುವೆಗೆ ಮುನ್ನ ಈತನನ್ನು ಆರಾದಿಸುವುದು (ನಂತರವೂ ಕೂಡ) ಮುದ್ರೆಯನ್ನು ಹಾಕಿಸಿಕೊಂಡು ಈತನ ದಾಸನಾಗುವುದು, ದೇವದಾಸಿಯರನ್ನು ಬಿಡುವ ಪದ್ಧತಿ (ಈಗ ಕೋಗಳಿಯಲ್ಲಿ ಇಲ್ಲ) ಊರಿನ ಹೆಣ್ಣು ದೇವತೆಗಳಿಗೆ ಅದರಲ್ಲು ಕೆಳವರ್ಗದ ದೇವತೆಗಳಿಗೆ ಈತ ಅಣ್ಣನೆನ್ನುವುದು, ಓಕುಳಿಯಾಡುವುದು, ಕಡುಬಿನ ಕಾಳಗ, ಬ್ಯಾಟಿಗಿಡ ತರುವುದು, ಮುಂತಾದ ಅಂಶಗಳನ್ನು ನಾವು ಈ ಅಧ್ಯಯನದಿಂದ ಕಂಡು

ಕೊಳ್ಳಬಹುದು. ಈ ಅಧ್ಯಯನವನ್ನು ನಾವು ಇಡಿಯಾಗಿ ಅವಲೋಕಿಸಿದಾಗ ಇತರೆ ಗ್ರಾಮಗಳಲ್ಲಿ ಆಚರಿಸುವ ಆಚರಣೆಗಳಿಗಿಂತ ಕೋಗಳಿಯಲ್ಲಿ ವಿಶೇಷವಾಗಿ ಆಚರಿಸಲ್ಪಡುತ್ತವೆ ಎನ್ನವುದು ತಿಳಿಯುತ್ತದೆ.

ಈ ರೀತಿಯಾದ ಅಧ್ಯಯನವು ಸಂಪೂರ್ಣ ಕ್ಷೇತ್ರ ಕಾರ್ಯಕ್ಕೆ ಸಂಬಂಧಿಸಿದ್ದಾಗಿದ್ದು ಅಗತ್ಯವಿರುವಲ್ಲಿ ಗ್ರಂಥಗಳ ಬಳಕೆಯನ್ನು ಮಾಡಿಕೊಂಡು ಈ ಅಧ್ಯಯನಕ್ಕೆ ಕೂಡಿಹಾಕಿದ ಮಾಹಿತಿಯನ್ನು ಸಂಪೂರ್ಣವಾಗಿ ವೈಜ್ಞಾನಿಕ ವಿಶ್ಲೇಷಣೆಗೆ ತೊಡಗಿಸಿದ್ದೇನೆ ಎನ್ನುವುದನ್ನು ಒಪ್ಪಿಕೊಳ್ಳಲಾರೆ. ಆದರೂ ಮೇಲಿನ ಎಲ್ಲಾ ಅಂಶಗಳು ಅಧ್ಯಯನದ ಮುಖ್ಯ ಉದ್ದೇಶಗಳಾಗಿ ಮೂಡಿ ಬಂದಿವೆ. ಗ್ರಾಮಧ್ಯಯನದಲ್ಲಿ ಒಂದು ಗ್ರಾಮದ ಸಾಂಸ್ಕೃತಿಕ ಅಧ್ಯಯನ, ಗ್ರಾಮೀಣ ಸಮುದಾಯದ ಉದ್ಯೋಗ, ವ್ಯವಹಾರ, ಊಟ, ಉಡುಗೆ, ಮನರಂಜನೆ, ಆಚರಣೆ, ನಂಬಿಕೆ, ಸಂಪ್ರದಾಯ ಒಟ್ಟಾರೆ ಗ್ರಾಮೀಣ ಬದುಕೆಲ್ಲ ಇದರ ತೆಕ್ಕೆಗೆ ಸಿಗುತ್ತದೆ.

# ವಕ್ತೃವಿವರ

| ಕ್ರ ಸಂ. | ಹೆಸರು | ವಯಸ್ಸು | ವಿದ್ಯಾಭ್ಯಾಸ | ವೃತ್ತಿ | ಜಾತಿ | ವಾಸಸ್ಥಳ |
|---|---|---|---|---|---|---|
| ೧. | ಈಶ್ವರಪ್ಪ ಬಾಗಳಿ | ೫೫ | ಇಲ್ಲ | ಕೃಷಿ | ನಾಯಕ | ಕೋಗಳಿ |
| ೨. | ಸಿದ್ದಪ್ಪ ಪೂಜಾರಿ | ೫೩ | ೬ನೇ ತ. | ಅರ್ಚಕ | ಪದ್ಮಶಾಲಿ | ಕೋಗಳಿ |
| ೩. | ಕೊಟ್ರೇಶಪ್ಪ ಕೆ. | ೪೮ | ೫ನೇ ತ. | ಕೃಷಿ | ನಾಯಕ | ಕೋಗಳಿ |
| ೪. | ಪಾರವ್ವ ಎನ್ | ೫೨ | ಇಲ್ಲ | ಕೂಲಿ | ಹರಿಜನ | ಕೋಗಳಿ |
| ೫. | ಗಂಗವ್ವ | ೫೦ | ಇಲ್ಲ | ಕೂಲಿ | ಹರಿಜನ | ಕೋಗಳಿ |
| ೬. | ಪಕ್ಕೀರಪ್ಪ | ೫೮ | ಇಲ್ಲ | ಕೂಲಿ | ಚಲವಾದಿ | ಕೋಗಳಿ |
| ೭. | ಬಸವರಾಜ | ೩೦ | ೧೦ನೇ ತ. | ಕೃಷಿ | ಕುಂಬಾರ | ಕೋಗಳಿ |
| ೮. | ಗುರುಬಸವರಾಜ | ೩೦ | ೧೦ನೇ ತ. | ಕೃಷಿ | ಜಂಗಮ | ಕೋಗಳಿ |
| ೯. | ರ‍್ಯಾವಕ್ಕ ವಿ. | ೫೦ | ಇಲ್ಲ | ಕೂಲಿ | ನಾಯಕ | ಕೋಗಳಿ |
| ೧೦. | ಪಶುಪತಿ ಎಂ. | ೫೦ | ೭ನೇ ತ. | ಕೃಷಿ | ನಾಯಕ | ಕೋಗಳಿ |
| ೧೧. | ದುರುಗಮ್ಮ ಕೆ. | ೬೮ | ೪ನೇ ತ. | ಕೃಷಿ | ನಾಯಕ | ಕೋಗಳಿ |
| ೧೨. | ಮಾರುತಿ ಪಿ. | ೩೮ | ೧೦ನೇ ತ. | ಗುಮಾಸ್ತ | ಪದ್ಮಶಾಲಿ | ಕೋಗಳಿ |
| ೧೩. | ಹನುಮಂತ ಕೆ. | ೩೫ | ೭ನೇ ತ. | ಕೃಷಿ | ನಾಯಕ | ಕೋಗಳಿ |
| ೧೪. | ಹನುಮಂತ ಕೆ. | ೪೨ | ೩ನೇ ತ. | ಕೂಲಿ | ನಾಯಕ | ಕೋಗಳಿ |
| ೧೫. | ಮಂಜಪ್ಪ | ೪೮ | ೭ನೇ ತ. | ಕೃಷಿ | ನಾಯಕ | ಕೋಗಳಿ |
| ೧೬. | ದುರುಗಪ್ಪ | ೫೨ | ಇಲ್ಲ | ಕೂಲಿ | ಹರಿಜನ | ಕೋಗಳಿ |
| ೧೭. | ಗುರುವಪ್ಪ ಬಿ. | ೫೦ | ೭ನೇ ತ. | ಕೃಷಿ | ನಾಯಕ | ಕೋಗಳಿ |
| ೧೮. | ಕೊಟ್ರೇಶ | ೩೭ | ೫ನೇ ತ. | ಕೃಷಿ | ವೀರಶೈವ | ಕೋಗಳಿ |
| ೧೯. | ವೀರಣ್ಣ | ೫೮ | ೫ನೇ ತ. | ಕೂಲಿ | ಅಕ್ಕಸಾಲಿ | ಕೋಗಳಿ |
| ೨೦. | ಶ್ರೀ ನಾರಾಯಣ | ೫೫ | ಬಿ.ಎ. | ಕೃಷಿ. ಸ. | ವೀರಶೈವ | ಕೊಟ್ಟೂರು |
| ೨೧. | ಮಂಜುನಾಥ ಬಿ. | ೩೮ | ಬಿ.ಎ. | ಗ್ರಾಮಲೆಕ್ಕಿಗ | ವೀರಶೈವ | ಕೋಗಳಿ |
| ೨೨. | ನಿಂಗಪ್ಪ | ೫೦ | ೬ನೇ ತ. | ಕೃಷಿ | ನಾಯಕ | ಕೋಗಳಿ |

# ಗ್ರಂಥಋಣ

೧. ಅರ್ಜುನ ಯು ಗೊಳಸಂಗಿ :೧೯೯೫; ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ;
ಮಲ್ಲಿಕಾರ್ಜುನ ಪ್ರಕಾಶನ,
ಗೊಳಸಂಗಿ.

೨. ಅಂಜಿನಪ್ಪ ದನಕಾವರ್: ೨೦೦೩; ಚಿಗಟೇರಿ ನಾರಪ್ಪ; ಎಂ. ಫಿಲ್ ಅಪ್ರಕಟಿತ ಪ್ರಬಂಧ,
ಕನ್ನಡ ವಿಶ್ವ ವಿದ್ಯಾಲಯ. ಹಂಪಿ.

೩. ಉಮಾಪತಿ ಬಿ:೨೦೦೧-೦೨; ಕಡಲಬಾಳು ಆಂಜನೇಯ ಒಂದು ಸಾಂಸ್ಕೃತಿಕ ಅಧ್ಯಯನ;
ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವ ವಿದ್ಯಾಲಯಕ್ಕೆ
ಸಲ್ಲಿಸಿದ ಅಪ್ರಕಟಿತ ಕಿರು ಪ್ರಬಂಧ.

೪. ಕನ್ನಡ-ಕನ್ನಡ ನಿಘಂಟು ಎರಡನೇ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು, ಪ್ರಸಾರಾಂಗ,
ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು.

೫. ಎಂ. ಚಿದಾನಂದ ಮೂರ್ತಿ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ;
ಸ್ವಪ್ನ ಬುಕ್ ಸ್ಟಾಲ್,
ಬೆಂಗಳೂರು.

೬. ದೇ. ಜರೇಗೌಡ; ೨೦೦೧; ಜಾನಪದ ಅಧ್ಯಯನ; ರಾಜೇಂದ್ರ ಪ್ರಿಂಟರ್ಸ್,
ಮೈಸೂರು.

೭. ದೇ. ಜವರೇಗೌಡ; ೧೯೯೭;ಶ್ರೀರಾಮಾಯಣದರ್ಶನಂ ವಚನ ಚಂದ್ರಿಕೆ (೫ನೆಯ ಮುದ್ರಣ)
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿ ಪುರಂ,
ಮೈಸೂರು.

೮. ದಾಸೇಗೌಡ ಜಿ. ವಿ; ೧೯೭೮; ಕನ್ನಡ ಐತಿಹ್ಯಗಳು; ತೇಜಸ್ವಿನಿ ಪ್ರಕಾಶನ, ಮೈಸೂರು.

೯. ಹಂಪ. ನಾಗರಾಜಯ್ಯ; ಕರ್ನಾಟಕದ ಜಾತ್ರೆಗಳು; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೦. ಜೆ. ಎಂ. ನಾಗಯ್ಯ; ೨೦೦೨; ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ;
ಲೋಹಿಯ ಪ್ರಕಾಶನ, ಬಳ್ಳಾರಿ.

೧೧. ಪ್ರಹ್ಲಾದಾಚಾರ್ಯ ಕೆ; ೧೯೮೮; ಕಡಲಬಾಳು ರಾಯರ ಚರಿತ್ರೆ;
ಜಗದಾನಿ ಪ್ರಕಾಶನ ಹೊಸಪೇಟೆ.

೧೨. ಮಂಜುನಾಥ ಬೇವಿನಕಟ್ಟಿ; ೧೯೯೪; ಮಲಿಯಮ್ಮ ನಿನ್ನಾಲ್ಕುದೋ..... ಉದೋ;
ಅಂಬಿಕಾ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್,
ಹೊಸಪೇಟೆ.

೧೩. ಡಿ. ಟಿ. ರಂಗಸ್ವಾಮಿ; ೨೦೦೬; ಮಹಾಕವಿ ವಾಲ್ಮೀಕಿ ವರ್ಧಂತಿ;

ಪ್ರಕಾಶನ ಜಿಲ್ಲಾ ಮದಕರಿ ನಾಯಕ
ವಿದ್ಯಾ ಸಂಸ್ಥೆ, ಚಿತ್ರದುರ್ಗ.

೧೪. ಹಿ. ಶಿ. ರಾಮಚಂದ್ರೇಗೌಡ; ೧೯೯೮; ಜಾನಪದ ಸಾಂಸ್ಕೃತಿಕ ಆಯಾಮಗಳು;
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೫. ಬೆನಗಲ್ ರಾಮರಾವ್; ಪುರಾಣ ನಾಮ ಚೂಡಮಣಿ, ಪಾನ್ಯಂ ಸುಂದರಶಾಸ್ತ್ರಿ ವಿದ್ವಾ,
ಪ್ರ. ಸಂಪಾದಕರು ಬಿ. ಎಂ. ಶ್ರೀ.

೧೬. ಹೆಚ್. ಜೆ. ಲಕ್ಕಪ್ಪಗೌಡ; ಜಾನಪದ ಕೈಪಿಡಿ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೭. ವಿಶ್ವನಾಥ; ೨೦೦೦; ಗ್ರಾಮಗಳ ಸಾಂಸ್ಕೃತಿಕ ಪರಿವೇಶ; ದೇವಿ ಪ್ರಕಾಶನ ಮೈಸೂರು.

೧೮. ಆರ್. ವಿಜಯ ಕುಮಾರ; ೨೦೦೨-೦೩; ಮೊರಬದ ವೀರಭದ್ರೇಶ್ವರ ಸ್ವಾಮಿ
ಸಾಂಸ್ಕೃತಿಕ ಅಧ್ಯಯನ; ಮಾಸ್ಟರ್ ಆಫ್ ಫಿಲಾಸಫಿ (ಎಂ. ಫಿಲ್) ಪದವಿಯ ಆಂಶಿಕ
ಅವಶ್ಯಕತೆಗಾಗಿ ಕನ್ನಡ ವಿ.ವಿ.ಗೆ ಸಲ್ಲಿಸಿದ ಅಪ್ರಕಟಿತ ಸಂಪ್ರಬಂಧ.

೧೯. ಎಸ್. ಎಸ್. ಹಿರೇಮಠ; ೧೯೯೩; ಜಾತ್ರೆಗಳು; ಸಮತಾ ಪ್ರಕಾಶನ, ಹೊಸಪೇಟೆ.

೨೦. ಶ್ರೀರಾಮ ಇಟ್ಟಣ್ಣನವರ; ೧೯೯೫; ಹಲಗಲಿ: ಗ್ರಾಮ ಜಾನಪದ;
ಅಲ್ಲಮ ಮುದ್ರಣಾಲಯ; ಗದಗ.



ಕೇರಿ ದುರುಗಮ್ಮನ ರಥವನ್ನು ಪೂಜಿಸಿ
ಪ್ರದಕ್ಷಿಣೆಗೆ ಹೊರಡುವುದು.



